KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೧೯, ೨೦೦೯ (ಕಾರ್ತೀಕ ೨೮, ಶಕ ವರ್ಷ ೧೯೩೧) | ಸಂಚಿಕೆ ೪೬ |
|---|---|---|



## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ
### ಬಿ3:ಅಮೊ:ವಾಹನ:18/2001–02, ದಿನಾಂಕ:1ನೇ ಆಗಸ್ಟ್, 2009

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು:** ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್, ಹೊಸನಗರ, (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾದ್ಯತೆದಾರರು:** ಶ್ರೀ ಅಬ್ಬು ಬಿನ್ ಸೈಯದ್ ಆಲಿ,

ಬನ್ನೂರು ಗ್ರಾಮ, ಮತ್ತು ಅಂಚೆ, ಬಾಳೆಹೊನ್ನೂರು, ಎನ್.ಆರ್.ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
(ಶ್ರೀ ಎಸ್.ಎನ್. ಮಂಜುನಾಥ, ವಕೀಲರು, ಸಾಗರ)

**ಪ್ರಸ್ತಾವನೆ:**

ದಿನಾಂಕ:21.07.2001 ರಂದು ಹೊಸನಗರ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತು ಮಾಡಲು ಸುಮಾರು ಮಧ್ಯರಾತ್ರಿ 1–00 ಗಂಟೆ ಸಮಯದಲ್ಲಿ ಹೊಸನಗರ ಬಸ್‌ಸ್ಟ್ಯಾಂಡ್ ಹತ್ತಿರ ಕಾಯುತ್ತಾ ನಿಂತಿದ್ದಾಗ ರಿಪ್ಪನ್‌ಪೇಟೆ ಕಡೆಯಿಂದ ಒಂದು 407 ವಾಹನ ನಂ. ಕೆಎ–18–3212 ಆಗಿದ್ದು, ಅದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೆ ಇಲಾಖೆಯ ಸಮವಸ್ತ್ರದಾರಿಗಳನ್ನು ಕಂಡು ವೇಗವಾಗಿ ಚಲಿಸಿರುತ್ತದೆ. ನಂತರ ಇಲಾಖಾ ಜೀಪು ನಂ. ಕೆಎ–14–ಜಿ–421ರಲ್ಲಿ ಈ ವಾಹನವನ್ನು ಹಿಂಭಾಲಿಸಿ ಪೊಲೀಸ್ ಠಾಣೆಗೆ ವೈರ್‌ಲೆಸ್ ಮೂಲಕ ತಿಳಿಸಿ ವಾಹನ ತಡೆಯಲು ಸೂಚಿಸಿದಂತೆ, ಮುಸ್ಲಿಂ ಕೇರಿಯಲ್ಲಿ ವಾಹನವನ್ನು ನಿಲ್ಲಿಸಿ ಆರೋಪಿಗಳು ಕತ್ತಲೆಯಲ್ಲಿ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ ಅದರಲ್ಲಿ 25 ಚೀಲ ಹಸಿ ಶುಂಠಿ ಇದ್ದು, ಅದರ ಕೆಳಭಾಗದಲ್ಲಿ 10 ಶ್ರೀಗಂಧ ತುಂಬಿದ ಚೀಲಗಳಿದ್ದು, ಯಾವುದೇ ಪರವಾನಿಗೆ ಇಲ್ಲದೆ ಕಾನೂನು ಬಾಹಿರವಾಗಿ ಶ್ರೀಗಂಧವನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದಾರೆಂದು ಪರಿಗಣಿಸಿ, ವಾಹನ, ಶ್ರೀಗಂಧ ಮತ್ತು ಹಸಿ ಶುಂಠಿ ಜಪ್ತುಮಾಡಿ ಮಹಜರ್ ಕ್ರಮ ಜರುಗಿಸಿ ಹೊಸನಗರ ಪೊಲೀಸ್ ಠಾಣೆ ಗುನ್ನೆ ನಂ.88/2001 ದಿನಾಂಕ:22.07.2001 ರಂದು ದಾಖಲಿಸಿ ನಂತರ ವಾಹನ ಮತ್ತು ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ವಾಹನ ಮತ್ತು ಶ್ರೀಗಂಧವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿರುತ್ತದೆ.

ನಂತರ ಈ ವಾಹನದ ಮಾಲೀಕರೆಂದು ಮತ್ತು ಲಭ್ಯತೆಯ ಆರ್.ಸಿ. ವಿವರದಂತೆ ಮಾಲೀಕರಾದ ಶ್ರೀ ಅಬ್ಬು ಬಿನ್ ಸೈಯದ್ ಆಲಿ, ಬನ್ನೂರು ಗ್ರಾಮ ಮತ್ತು ಅಂಚೆ, ಬಾಳೆಹೊನ್ನೂರು, ಎನ್.ಆರ್.ಪುರ ತಾಲ್ಲೂಕು ರವರು ವಕೀಲರಾದ ಶ್ರೀ ಬಿ.ಎ. ಪುಟ್ಟಪ್ಪ, ಸಾಗರ ಇವರ ಮುಖಾಂತರ ಕ್ಲೈಮು ಅರ್ಜಿಯನ್ನು ದಿನಾಂಕ:26.09.2001 ರಂದು ಈ ನ್ಯಾಯಾಲಯಕ್ಕೆ

ಸಲ್ಲಿಸಿ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಕೋರಿಕೆ ಅರ್ಜಿಯನ್ನು ಈ ನ್ಯಾಯಾಲಯದ ಆದೇಶ ಸಂಖ್ಯೆ: ಅಮೊ:ವಾಹನ–18/01–02 ದಿನಾಂಕ:07.06.2003 ರಂದು ತಿರಸ್ಕರಿಸಿ ಆದೇಶವಾಗಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ.22/03ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಅಪೀಲಿನ ದಿನಾಂಕ:20.10.2003ರಲ್ಲಿ 5 ಷರತ್ತುಗಳನ್ನು ವಿಧಿಸಿ ಖಾಲಿ ವಾಹನವನ್ನು ಮಧ್ಯಂತರ ಅವಧಿಗೆ ಬಿಡುಗಡೆಗೆ ಆದೇಶವಾಗಿರುತ್ತದೆ. ಆದರೆ ವಾಹನವನ್ನು ಇಲ್ಲಿಯವರೆವಿಗೂ ವಾಹನ ಮಾಲೀಕರು ಬಿಡಿಸಿಕೊಂಡಿರುವುದಿಲ್ಲ.

ನಂತರ ಪಿಡಬ್ಲ್ಯೂ–2 ಬಿ.ಕೆ. ನಂಜೇಗೌಡ, ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಇವರನ್ನು ದಿನಾಂಕ:06.08.2005ರಂದು ಕರೆಸಿ ಸಹಾಯಕ ಸರ್ಕಾರಿ ಅಭಿಯೋಜಕರಿಂದ ಮುಖ್ಯ ವಿಚಾರಣೆ 2001ರಲ್ಲಿ ಹೊಸನಗರದಲ್ಲಿ ಆರಕ್ಷಕ ವೃತ್ತ ನಿರೀಕ್ಷಕನಾಗಿದ್ದೆ. ದಿನಾಂಕ:27.02.2001ರಂದು ಗಸ್ತಿನಲ್ಲಿದ್ದಾಗ ಹೊಸನಗರ ಕಡೆಯಿಂದ ರಿಪ್ಪನ್‌ಪೇಟೆ ಕಡೆ ಹೋಗಲು ಒಂದು 407 ವಾಹನ ಬಂದಿತು. ನಿಲ್ಲಿಸಲು ಸೂಚಿಸಿದೆವು. ನಿಲ್ಲಿಸದೆ ವಾಪಾಸ್ ಹೊಸನಗರದ ಕಡೆ ಹೋದಾಗ ಬೆನ್ನಟ್ಟಿದಾಗ ಮಸೀದಿ ರಸ್ತೆಯ ಭಾಷಾ ಸಾಬ್‌ನ ಅಂಗಡಿ ಹತ್ತಿರ ನಿಲ್ಲಿಸಿ ಆರೋಪಿಗಳು ಓಡಿಹೋಗಿರುತ್ತಾರೆ. ವಾಹನ ನಂ.ಕೆಎ–18–3212 ಆಗಿದ್ದು, ವಾಹನದೊಳಗೆ 25 ಚೀಲ ಶುಂಠಿ ಇದ್ದು, ಅದರ ಕೆಳಭಾಗದಲ್ಲಿ 10 ಚೀಲದಲ್ಲಿ ಶ್ರೀಗಂಧದ ಚಕ್ಕೆ, ಬೇರು, ಕಾಂಡ ಇದ್ದು, ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಮಹಜರ್ ಕ್ರಮದೊಂದಿಗೆ ವಾಹನ ಮತ್ತು ಶ್ರೀಗಂಧವನ್ನು ಜಪ್ತುಮಾಡಿ ನಂಬರ್ ಕೊಟ್ಟು ಶ್ರೀಗಂಧ 181.5 ಕೆ.ಜಿ. ಇದ್ದು, ನಿಪಿ–1ಎ ಮತ್ತು ನಿಪಿ–2ಎ ನನ್ನ ಸಹಿ ಇರುತ್ತದೆ. ಮಹಜರ್‌ನ್ನು ನನ್ನ ಉಕ್ತಲೇಖನದಲ್ಲಿ ಬರೆದಿದೆ. ಮಹಜರ್ ಮುಗಿಯುವಾಗ ಬೆಳಿಗ್ಗೆ 6 ಗಂಟೆಯಾಗಿತ್ತು. ವಾಹನ ಮತ್ತು ಮುದ್ದೆಮಾಲನ್ನು ಠಾಣಾಧಿಕಾರಿಗೆ ವಹಿಸಿಕೊಟ್ಟೆ, ಮುಂದಿನ ತನಿಖೆಯನ್ನು ಆರಕ್ಷಕ ಉಪ ನಿರೀಕ್ಷಕರು ಕೈಗೊಂಡಿದ್ದಾರೆ. ಆರೋಪಿಗಳ ಪತ್ತೆಗೆ ಪ್ರಯತ್ನಿಸಿದರೂ ಪತ್ತೆಯಾಗಿಲ್ಲ. ವಾಸನೆ ಮತ್ತು ಮೇಲ್ನೋಟದಿಂದ ಅದು ಶ್ರೀಗಂಧ ಎಂದು ಖಚಿತಪಡಿಸಿಕೊಂಡೆವು. ವಾಹನ ಮಾಲೀಕರ ಗಮನದಲ್ಲಿದ್ದು ಈ ಅಪರಾಧ ಎಸಗಿದ್ದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪಾಟಿ ಸವಾಲು ಎಸ್.ಎನ್.ಎಂ. ವಕೀಲರಿಂದ ವಾಹನದಿಂದ ಇಳಿದು ಓಡಿದವರು ಯಾರೆಂದು ಗುರುತಿಸಲು ಸಾಧ್ಯವಾಗಲಿಲ್ಲ. ವಾಹನ ಪರಿಶೀಲಿಸಿದಾಗ 25 ಚೀಲ ಶುಂಠಿ ಕೆಳಗೆ 10 ಚೀಲ ಶ್ರೀಗಂಧವಿತ್ತು. ಈ ವಾಹನದ ಮಾಲೀಕತ್ವದ ಬಗ್ಗೆ ವಿಚಾರಣೆ ಮಾಡಲಿಲ್ಲ. ಅಬ್ಬು ಎನ್ನುವವರು ಈ ವಾಹನ ಬಾಡಿಗೆಗೆ ಕೊಟ್ಟು ಜೀವನ ಮಾಡುತ್ತಿರುವುದು ತಿಳಿದಿಲ್ಲ. ಜಪ್ತಾದ ಅರಣ್ಯ ಉತ್ಪನ್ನವನ್ನು ತೂಕ ಮಾಡಿ ಮಹಜರ್ ಬರೆದಿದೆ. ಈ ಮಹಜರನ್ನು ಪಿಸಿ–1231 ಬರೆದಿದ್ದು, ಈ ವಾಹನವನ್ನು ನಾನು, ವಾಹನ ಚಾಲಕ ಮತ್ತು ಇಬ್ಬರು ಸಿಬ್ಬಂದಿಯವರು ಜಪ್ತು ಮಾಡಿದ್ದು ಮಹಜರಿಗೆ ವಾಹನ ಚಾಲಕ ಸಹಿಮಾಡಿಲ್ಲ. ಎಲ್ಲಾ ಚೀಲಗಳನ್ನು ವಾಹನದಿಂದ ಇಳಿಸಿ ಪರಿಶೀಲಿಸಿರುತ್ತೇವೆ. ದಿನಾಂಕ:22.07.2001ರಂದು ಜಪ್ತಾದ ವಾಹನದಲ್ಲಿ ಶ್ರೀಗಂಧವಿರಲಿಲ್ಲ. ಸುಳ್ಳು ಕೇಸು ದಾಖಲಿಸಿದ್ದೇವೆ ಎನ್ನುವುದು, ಕ್ರೈಂ ಪ್ರಕರಣಗಳ ಅಂಕಿಅಂಶ ಹೆಚ್ಚಿಸುವ ಬಗ್ಗೆ ಅಮಾಯಕರ ವಾಹನಕ್ಕೆ ವಾರಸುದಾರರಿಲ್ಲದ ಶ್ರೀಗಂಧವನ್ನು ಹಾಕಿ ಕೇಸು ದಾಖಲಿಸಿದೆ ಎಂದರೆ ಸರಿಯಲ್ಲ.

ಡಿಫೆನ್ಸ್ ಸಾಕ್ಷಿ ವಿಚಾರಣೆಗೆ ದಿನಾಂಕ:24.01.2009, 04.04.2009, 30.05.2009ರಂದು ಮೂರು ಬಾರಿ ದಿನಾಂಕವನ್ನು ನಿಗದಿಪಡಿಸಿದ್ದು, ಡಿಫೆನ್ಸ್ ಸಾಕ್ಷಿಯು 3 ದಿನಾಂಕಗಳಲ್ಲಿ ಗೈರುಹಾಜರಾಗಿದ್ದು, ಈ ಪ್ರಕರಣದಲ್ಲಿ ಸಾಕ್ಷಿ ನುಡಿಯಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಹಂತಕ್ಕೆ ದಿನಾಂಕ ನಿಗದಿಪಡಿಸಿದೆ.

ಡಿಫೆನ್ಸ್ ಕಡೆಯವರಿಗೆ ವಾದ ಮಂಡಿಸಲು ದಿನಾಂಕ:06.06.2009, 20.06.2009, 27.06.2009, 18.07.2009ರಂದು 4 ಬಾರಿ ದಿನಾಂಕವನ್ನು ನಿಗದಿಪಡಿಸಿದ್ದರೂ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗದೇ ಇದ್ದುದ್ದರಿಂದ ಈ ಪ್ರಕರಣದಲ್ಲಿ ಡಿಫೆನ್ಸ್ ಕಡೆಯವರಿಗೆ ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಏನೂ ವಾದವಿಲ್ಲವೆಂದು ತೀರ್ಮಾನಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:18.07.2009 ರಂದು ವಾದ ಮಂಡಿಸಿ, ವಾಹನವನ್ನು ಶ್ರೀಗಂಧದ ಸಮೇತ ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರು ದಿನಾಂಕ:22.07.2001 ರಂದು ಪತ್ತೆ ಹಚ್ಚಿ ವಾಹನ 407 ವ್ಯಾನ್ ಕೆಎ–18–3212 ನ್ನು ಮತ್ತು ಶ್ರೀಗಂಧ 181 ಕೆ.ಜಿ. 500 ಗ್ರಾಂ ನ್ನು ಜಪ್ತು ಮಾಡಿ, ಹೊಸನಗರ ಪೊಲೀಸ್ ಠಾಣೆಯ ಗುನ್ನೆ ನಂ.88/01ನ್ನು ದಾಖಲಿಸಿ ವಾಹನ ಮತ್ತು ಶ್ರೀಗಂಧವನ್ನು ಮಹಜರ್, ಪ್ರಥಮ ವರ್ತಮಾನ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಮತ್ತು ಸಾಕ್ಷಿಯ ಹೇಳಿಕೆಗೂ, ಸಲ್ಲಿಸಿದ ದಾಖಲೆಗೂ ಒಂದಕ್ಕೊಂದು ತಾಳೆಯಾಗುತ್ತಿದೆ. ಘಟನೆ ದಿನ ವಾಹನ ಮಾಲೀಕರು ವಾಹನಕ್ಕೆ ನೇಮಿಸಿದ ಚಾಲಕನನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ಪೂರ್ಣ ಸಾಕ್ಷಿ ನುಡಿಸಿರುವುದಿಲ್ಲ. ಅಲ್ಲದೇ ಆರ್.ಸಿ. ಮಾಲೀಕರು ಸಾಕ್ಷಿ ನುಡಿದಿರುವುದಿಲ್ಲ. ಈ ಬಗ್ಗೆ ಡಿಫೆನ್ಸ್ ಕಡೆಯವರು ಸತ್ಯವನ್ನು ಮರೆಮಾಚಿರುತ್ತಾರೆ. ಇಂತಹುದೇ ಅಂಶವನ್ನು ಗಣನೆಗೆ ತೆಗೆದುಕೊಂಡು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ರಿಟ್ ಪಿಟಿಷನ್ ನಂ.10144/2006 ದಿನಾಂಕ:23.10.2008ರಲ್ಲಿ ಆದೇಶವಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1) ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು 407 ವ್ಯಾನ್ ನಂ.ಕೆಎ–18–3212 ರಲ್ಲಿ ಶ್ರೀಗಂಧ 181.500 ಕೆ.ಜಿ.ಯನ್ನು ದಿನಾಂಕ:22.07.2001 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2) ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ 407 ವ್ಯಾನ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಹೌದು ಎಂದಾಗಿರುತ್ತದೆ.

**ಅಂಶ–1:**

ದಿನಾಂಕ:21.07.2001ರಂದು ಹೊಸನಗರ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತು ತಿರುಗುತ್ತಿದ್ದಾಗ ಸುಮಾರು 1 ಗಂಟೆ ಸಮಯದಲ್ಲಿ ರಿಪ್ಪನ್‌ಪೇಟೆ ಕಡೆಯಿಂದ ಹೊಸನಗರಕ್ಕೆ ರಾಜ್ಯ ಹೆದ್ದಾರಿ 206ರಲ್ಲಿ ಒಂದು 407 ವಾಹನ ಕೆಎ–18–3212 ಶ್ರೀಗಂಧವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಹಚ್ಚಿ ವಾಹನದಲ್ಲಿ 25 ಚೀಲ ಶುಂಠಿ ಜೊತೆಯಲ್ಲಿ ತಳಭಾಗದಲ್ಲಿ ಶ್ರೀಗಂಧ 10 ಚೀಲ ಇದ್ದು, ತೂಕ 181.500 ಕೆ.ಜಿ. ಇದ್ದು, ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ವಾಹನ ಮತ್ತು ಶ್ರೀಗಂಧವನ್ನು ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ವರದಿಯೊಂದಿಗೆ ಇಲಾಖಾ ಪರ ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 86, 87 ಮತ್ತು ಐ.ಪಿ.ಸಿ. ಕಲಂ 379 ರ ಅಡಿಯಲ್ಲಿ ಗುನ್ನೆ ನಂ.88/2001ರಲ್ಲಿ ಕೇಸನ್ನು ದಾಖಲಿಸಿ ದಾಖಲೆಗಳನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನವನ್ನು ಶ್ರೀಗಂಧ 181.500 ಕೆ.ಜಿ. ಕಳ್ಳಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಅಬ್ಬು ಬಿನ್ ಸೈಯದ್ ಆಲಿ, ಬನ್ನೂರು ಗ್ರಾಮ ಮತ್ತು ಅಂಚೆ, ಬಾಳೆಹೊನ್ನೂರು, ಎನ್.ಆರ್.ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ದಿನಾಂಕ:26.09.2001 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ ಪತ್ರವನ್ನು ದಿನಾಂಕ:12.09.2001 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿನಾಂಕ:07.06.2003ರಂದು ತಿರಸ್ಕರಿಸಿ ಆದೇಶವಾಗಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ.22/03ರಲ್ಲಿ ಮೇಲ್ಮನವಿ ಸಲ್ಲಿಸಿ ಸದರಿ ಅಪೀಲ್ ದಿನಾಂಕ:20.10.2003ರಲ್ಲಿ ವಾಹನ ಮಾಲೀಕರಿಗೆ ಷರತ್ತು ವಿಧಿಸಿ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಆದೇಶವಾಗಿದೆ. ಆದರೆ ಇಲ್ಲಿಯವರೆವಿಗೂ ವಾಹನವನ್ನು ಮಧ್ಯಂತರ ಅವಧಿಗೆ ಬಿಡಿಸಿಕೊಂಡಿರುವುದಿಲ್ಲ. ಇದರಿಂದ ನ್ಯಾಯಾಲಯದ ಆದೇಶವನ್ನು ವಾಹನ ಮಾಲೀಕರು ಪಾಲಿಸಿರುವುದಿಲ್ಲ. ನಂತರ ಡಿಫೆನ್ಸ್ ಸಾಕ್ಷಿ ಹೇಳಿಕೆಗೆ 3 ಬಾರಿ ಮತ್ತು ಡಿಫೆನ್ಸ್ ಕಡೆಯವರು ವಾದ ಮಂಡಿಸಲು 4 ಬಾರಿ ಕಾಲಾವಕಾಶ ನೀಡಿದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿನಾಂಕ:22.07.2001 ರಂದು 407 ವಾಹನ ಕೆಎ–18–3212 ರಲ್ಲಿ ಶ್ರೀಗಂಧ 181.500 ಕೆ.ಜಿ.ಯನ್ನು ರಹದಾರಿ ಇಲ್ಲದೆ ಅಕ್ರಮವಾಗಿ ರಿಪ್ಪನ್‌ಪೇಟೆಯಿಂದ ಹೊಸನಗರ ಮಾರ್ಗವಾಗಿ ಸಾಗಿಸುತ್ತಿರುವಾಗ ಹೊಸನಗರ ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕೇಸ್ ನಂ.88/2001ನ್ನು ದಾಖಲಿಸಿ ಎಲ್ಲಾ ದಾಖಲೆಗಳೊಂದಿಗೆ ಸಾಕ್ಷಿ ಸಹಿಯೊಂದಿಗೆ ವಾಹನವನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಮತ್ತು ಈ ವಾಹನದಲ್ಲಿದ್ದ ಶ್ರೀಗಂಧವನ್ನು ಬಿಟ್ಟುಕೊಡುವಂತೆ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆರ್.ಸಿ. ಮಾಲೀಕರು ದಿನಾಂಕ:26.09.2001ರಂದು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಬಾಧ್ಯತೆದಾರರು ಮುಗ್ಧರೆಂದು ಮತ್ತು ಇವರ ಗಮನಕ್ಕೆ ಬರಲಿಲ್ಲವೆಂದು ಮತ್ತು ಈ ವಾಹನ ಕಳ್ಳತನವಾದ ಬಗ್ಗೆ ಠಾಣೆಗೆ ದೂರು ನೀಡಿದ ಬಗ್ಗೆಯಾಗಲೀ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದರೆ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಆಗದಂತೆ ಆರ್.ಸಿ. ಮಾಲೀಕರು ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ, ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್, ಹೊಸನಗರ ಇವರು ಜಪ್ತು ಮಾಡಿದ ವಾಹನ 407 ವ್ಯಾನ್ ಕೆಎ–18–3212 ರಲ್ಲಿ ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಶ್ರೀಗಂಧ 181.500 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ 407 ವ್ಯಾನ್ ಕೆಎ–18–3212 ಮತ್ತು ಈ ವಾಹನದಲ್ಲಿದ್ದ ಶ್ರೀಗಂಧ 181.500 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:01.08.2009ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.765 ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ:32/99–2000, ದಿನಾಂಕ:1ನೇ ಆಗಸ್ಟ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿಗಳು, ನಗರ ವಲಯ, ನಗರ.

(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾದ್ಯತೆದಾರರು:** ಶ್ರೀ ಎನ್. ವಾಮನ್ ನಾಯ್ಕ ಬಿನ್ ಗೋವಿಂದನಾಯ್ಕ, ಅಂಬಾನಿಲಯ ವಾಸಿ, ನೆರಳಗಟ್ಟೆ ಗ್ರಾಮ, ಕುರಕುಂಜಿ ಅಂಚೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ, (ಶ್ರೀ ಬಿ. ನಾಗರಾಜ್, ವಕೀಲರು ಸಾಗರ)

**ಪ್ರಸ್ತಾವನೆ:**

ದಿನಾಂಕ:21.09.1999 ರಂದು ನಗರ ವಲಯದ ಯಡೂರು ಶಾಖೆಯ ಮತ್ತು ಹುಲಿಕಲ್ ತನಿಖಾ ಠಾಣೆಯ ವನಪಾಲಕರು ಮತ್ತು ಸಿಬ್ಬಂದಿಯವರು ಗೇಟಿನಲ್ಲಿ ಕಾಯುತ್ತಿರುವಾಗ ಮಧ್ಯಾಹ್ನ 1–45 ರ ಸಮಯದಲ್ಲಿ ಒಂದು ಬಸ್ ಬಂದಿದ್ದು, ಅದನ್ನು ಗೇಟಿನಲ್ಲಿ ಹೋಗಲು ಬಿಟ್ಟಾಗ ಅದರ ಹಿಂದೆ 407 ಮಿನಿಲಾರಿ ವೇಗವಾಗಿ ಬಂದು ತೆರೆದ ಗೇಟಿನಲ್ಲಿ ಹಾದುಹೋಗಲು ಪ್ರಯತ್ನಿಸಿದಾಗ ಕೂಡಲೇ ಗೇಟ್ ಬಂದ್ ಮಾಡಿದಾಗ ಚಾಲಕನು ವಾಹನವನ್ನು ನಿಲ್ಲಿಸಿ ನಂ. ಕೆಎ–20–2637 ಇದ್ದು, ಲಾರಿಯನ್ನು ವಾಚರ್ ಹತ್ತಿ ಪರಿಶೀಲಿಸುತ್ತಿರುವಾಗ ಶ್ರೀಗಂಧ ಎಂದು ಕೂಗಿದನು. ಅಷ್ಟರಲ್ಲಿ ವಾಹನವನ್ನು

ಚಾಲಕನು ಹಿಂದಕ್ಕೆ ಜೋರಾಗಿ ತಿರುಗಿಸಿದಾಗ ವಾಹನದಲ್ಲಿದ್ದ ವಾಚರ್ ಕೆಳಕ್ಕೆ ಹಾರಿದನು. ಲಾರಿಯಲ್ಲಿ ಡೀಸೆಲ್‌ನ ಖಾಲಿ ಬ್ಯಾರಲ್‌ಗಳಿದ್ದು, ಅದರಲ್ಲಿ ಶ್ರೀಗಂಧದ ತುಂಡುಗಳನ್ನು ಚೀಲದಲ್ಲಿ ಹಾಕಿರುವುದನ್ನು ವಾಚರ್ ನೋಡಿರುತ್ತಾನೆ. ನಂತರ ವಾಹನವನ್ನು ನಗರದ ಕಡೆ ವೇಗವಾಗಿ ಓಡಿಸಿರುತ್ತಾನೆ. ಆ ವಾಹನವನ್ನು ಬೆನ್ನಟ್ಟಿ ಘಾಟಿಯಿಂದ ಬರುತ್ತಿರುವ ಲಾರಿಯಲ್ಲಿ ಮಾಸ್ತಿಕಟ್ಟೆಗೆ ಬಂದು ಅಲ್ಲಿಂದ ದೂರವಾಣಿ ಮೂಲಕ ನಗರ ವಲಯ ಕಛೇರಿಗೆ ತಿಳಿಸಿದನು. ನಂತರ ದಾರಿಯಲ್ಲಿ ಬರುತ್ತಿರುವಾಗ ಗ್ರಾಮಸ್ಥರನ್ನು ವಿಚಾರಿಸಿದಾಗ ಸದರಿ ಲಾರಿಯಲ್ಲಿನ ಶ್ರೀಗಂಧವನ್ನು ಹೆಬ್ಬಲಿಗೆ ಮತ್ತು ನೇರಲಿಗದ್ದೆಯ ಮಧ್ಯವಿರುವ ಎರಡನೇ ಮೋರಿಯ ಅಡಿಯಲ್ಲಿ ಮುಚ್ಚಿಟ್ಟು ಲಾರಿಯನ್ನು ವೇಗವಾಗಿ ಓಡಿಸಿರುತ್ತಾನೆಂದು ತಿಳಿಸಿದರು. ಮೋರಿಯಡಿಯಲ್ಲಿದ್ದ ಶ್ರೀಗಂಧದ ಮೂಟೆಗಳು ಲಾರಿಯಲ್ಲಿ ಕಂಡ ಮೂಟೆಗಳೆಂದು ವನಪಾಲಕರು ಖಚಿತಪಡಿಸಿಕೊಂಡು 1 ರಿಂದ 80 ಶ್ರೀಗಂಧದ ತುಂಡುಗಳ ತೂಕ 220 ಕೆ.ಜಿ. ಇದ್ದು, ನಂತರ ವಾಹನವನ್ನು ವಿಚಾರಿಸುತ್ತಾ ಮುಂದೆ ಬಂದಾಗ 1999ನೇ ಎಂಪಿಎಂ ನೆಡುತೋಪಿನಲ್ಲಿ 4 ಖಾಲಿ ಬ್ಯಾರಲ್‌ಗಳನ್ನು ಅಡಗಿಸಿಟ್ಟು, ಅಲ್ಲಿಂದ ಲಾರಿಯನ್ನು ನಗರದ ಚಿಕ್ಕಪೇಟೆಯ ಚಂದ್ರಶೆಟ್ಟರ ಮನೆಯ ಮುಂದೆ ನಿಲ್ಲಿಸಿರುತ್ತಾರೆ. ಲಾರಿಯನ್ನು ಇಲಾಖಾ ಪರ ಜಪ್ತು ಮಾಡಿಕೊಳ್ಳಲಾಯಿತು. ಈ ರೀತಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದೆ ಎಂದು ಪರಿಗಣಿಸಿ ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 84, 85, 86, 87, 71(ಎ) ರಿಂದ (ಜಿ) ಮತ್ತು ಕರ್ನಾಟಕ ಅರಣ್ಯ ಕಾನೂನು1969ರ ಉಪನಿಯಮ 144, 165ರ ಪ್ರಕಾರ ನಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:36/99–2000 ವನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ಕೇಸಿಗೆ ಸಂಬಂಧಿಸಿದ ಆಸಾಮಿಗಳು ದಿನಾಂಕ:22.09.1999 ರಂದು ಬೆಳಿಗ್ಗೆ ನಗರ ವಲಯ ಕಛೇರಿಗೆ ಬಂದು ಕಛೇರಿಯ ಬಾಗಿಲು ಒಡೆದು ಒಳನುಗ್ಗಿ ರಾತ್ರಿ ಕಾವಲುಗಾರನ್ನು ಹೊಡೆದು, ಬಡಿದು, ಜೀವಬೆದರಿಕೆಯೊಡ್ಡಿ, ಕುರ್ಚಿ, ಮೇಜು, ಫ್ಯಾನು, ಕನ್ನಡಿ ಇತರೆ ಸಾಮಾನುಗಳನ್ನು ಜಖಂಗೊಳಿಸಿ ಸರ್ಕಾರಕ್ಕೆ ಸಾವಿರಾರು ರೂಪಾಯಿ ನಷ್ಟ ಉಂಟುಮಾಡಿರುತ್ತಾರೆ. ಈ ಬಗ್ಗೆ ಹೊಸನಗರ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿದ್ದು, ಗುನ್ನೆ ನಂ.87/99ನ್ನು ದಿನಾಂಕ:22.09.1999 ರಂದು ದಾಖಲಿಸಿರುತ್ತಾರೆ. ನಂತರ ಈ ಪ್ರಕರಣದಲ್ಲಿ ಪ್ರತಿಯೊಬ್ಬ ಆಸಾಮಿಗೆ ರೂ.1050/– ದಂಡ ವಿಧಿಸಿ, ದಂಡ ತುಂಬಲು ತಪ್ಪಿದಲ್ಲಿ 15 ದಿನ ಸಜೆ ನೀಡಲು ಮುನ್ಸಿಫ್ ನ್ಯಾಯಾಲಯ, ಹೊಸನಗರ ದಿನಾಂಕ:09.04.2008ರಂದು ತೀರ್ಪು ನೀಡಿದೆ.

ನಂತರ ಈ ವಾಹನದ ಬಗ್ಗೆ ಶ್ರೀ ಗೋವಿಂದರಾಯ ನಾಯ್ಕ ಬಿನ್ ವಾಮನ ನಾಯ್ಕ ಇವರು ವಕೀಲರ ಮುಖಾಂತರ ಕ್ಲೈಮು ಅರ್ಜಿಯನ್ನು ದಿನಾಂಕ:29.11.1999 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಆರ್.ಸಿ. ಮಾಲೀಕರ ಅರ್ಜಿಯನ್ನು ದಿನಾಂಕ:25.06.2005 ರಂದು ತಿರಸ್ಕರಿಸಿ ಆದೇಶವನ್ನು ಈ ನ್ಯಾಯಾಲಯದಿಂದ ಹೊರಡಿಸಿದೆ. ಆರ್.ಸಿ. ಮಾಲೀಕರು ಮೃತರಾದ ಬಗ್ಗೆ ಈ ನ್ಯಾಯಾಲಯದಿಂದ ನೊಂದಣಿ ಅಂಚೆ ಮೂಲಕ ನೋಟೀಸ್ ನಂ. ಅಮೊ:ವಾಹನ:32/99–2000ವನ್ನು ದಿನಾಂಕ:27.08.2003ರಲ್ಲಿ ಜಾರಿ ಮಾಡಿದ ಲಕೋಟೆಯ ಮೇಲೆ ಅಂಚೆ ಇಲಾಖೆಯವರು ``Addressed deceased. Return to sender'' ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಲಕೋಟೆ ಹಿಂದಿರುಗಿಸಿರುತ್ತಾರೆ. ಮತ್ತು ಆರ್.ಸಿ. ಮಾಲೀಕರು ದಿನಾಂಕ:12.09.2001 ರಂದು ಮೃತರಾದ ಬಗ್ಗೆ ಈ ನ್ಯಾಯಾಲಯಕ್ಕೆ ವಕೀಲರು ದಿನಾಂಕ:27.12.2003ರಂದು ಮೆಮೋದೊಂದಿಗೆ ಮರಣ ದೃಢೀಕರಣ ಪತ್ರ ಸಲ್ಲಿಸಿರುತ್ತಾರೆ. ನಂತರ ಈ ಬಗ್ಗೆ ಮೃತರ ವಾರಸುದಾರರು ಈ ವಾಹನದ ಬಗ್ಗೆ ಕ್ಲೈಮು ಅರ್ಜಿ ಸಲ್ಲಿಸಲು ಅನುಕೂಲವಾಗುವಂತೆ ಪೇಪರ್ ಪ್ರಕಟಣೆಯನ್ನು ದಿನಾಂಕ:04.12.2003 ರಂದು ಹೊರಡಿಸಿ, ಸದರಿ ಪ್ರಕಟಣೆಯು ದಿನಾಂಕ:12.12.2003ರಂದು "ವನಕೃಪ" ದಿನಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ನಂತರ ಮೃತರ ಮಗನಾದ ಶ್ರೀ ಎನ್. ವಾಮನ್ ನಾಯಕ್ ಬಿನ್ ಗೋವಿಂದನಾಯ್ಕ, ನೇರಳಗದ್ದೆ ಗ್ರಾಮ, ಕುಂದಾಪುರ ಇವರು ದಿನಾಂಕ:03.01.2004 ರಂದು ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿಯನ್ನು ಶ್ರೀ ಬಿ. ನಾಗರಾಜ್, ವಕೀಲರು, ಸಾಗರ ಇವರ ಮುಖಾಂತರ ಸಲ್ಲಿಸಿರುತ್ತಾರೆ. ಇವರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದ ಬಗ್ಗೆ ಪುನಃ ಪೇಪರ್ ಪ್ರಕಟಣೆಯನ್ನು ದಿನಾಂಕ:07.02.2005ರಂದು ಹೊರಡಿಸಿ 15 ದಿನಗಳ ಕಾಲಾವಕಾಶ ನೀಡಿ ತಕರಾರು ಇದ್ದಲ್ಲಿ ನ್ಯಾಯಾಲಯಕ್ಕೆ ಸಲ್ಲಿಸಲು ಸೂಚಿಸಿದ್ದು, ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪೇಪರ್‌ನಲ್ಲಿ ಪ್ರಕಟಿಸಲು ಕೋರಲಾಯಿತು. ಈ ಪ್ರಕಟಣೆಯು ದಿನಾಂಕ:15.02.2005ರಂದು "ಮನೋಭೂಮಿ" ದಿನಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ ಮತ್ತು ನಿಗದಿತ ಕಾಲಾವಕಾಶದಲ್ಲಿ ಯಾರೂ ಶ್ರೀ ಎನ್. ವಾಮನ್ ನಾಯಕ್ ಇವರ ಅರ್ಜಿಗೆ ತಕರಾರು ಸಲ್ಲಿಸಿರುವುದಿಲ್ಲ.

ದಿನಾಂಕ:25.06.2005ರ ಈ ನ್ಯಾಯಾಲಯದ ಆದೇಶದ ಮೇಲೆ ಬಾಧ್ಯತೆದಾರರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ.27/05ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಈ ಪ್ರಕರಣದ ಮೂಲ ದಾಖಲೆಗಳನ್ನು ಮಾನ್ಯ ಜಿಲ್ಲಾ ನ್ಯಾಯಾಲಯ, ಶಿವಮೊಗ್ಗದ ಪತ್ರ ಸಂಖ್ಯೆ: ಡಿಜೆಎಸ್–8196/07

ದಿನಾಂಕ:02.07.2007ರಲ್ಲಿ ಸಲ್ಲಿಸಲು ಆದೇಶಿಸಿದ ಮೇರೆಗೆ ಸಂಪೂರ್ಣ ಕಡತ 1 ರಿಂದ 35 ಪುಟಗಳ ಕಡತವನ್ನು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ: ವಾಹನ:32/99–00 ದಿನಾಂಕ:16.07.2007 ರಂದು ಮಾನ್ಯ ಜಿಲ್ಲಾ ನ್ಯಾಯಾಲಯ, ಶಿವಮೊಗ್ಗಕ್ಕೆ ನೊಂದಣಿ ಅಂಚೆ ಮೂಲಕ ಸಲ್ಲಿಸಲಾಗಿರುತ್ತದೆ. ಸದರಿ ಅಪೀಲಿನ ದಿನಾಂಕ:08.04.2009ರಲ್ಲಿ ಜಿಲ್ಲಾ ನ್ಯಾಯಾಲಯವು ದಿನಾಂಕ:25.06.2005 ರ ಈ ನ್ಯಾಯಾಲಯದ ಆದೇಶವನ್ನು ಎತ್ತಿಹಿಡಿದ ವಾಹನ ಮಾಲೀಕರ ಮನವಿಯನ್ನು ತಳ್ಳಿಹಾಕಿ ಆದೇಶ ಹೊರಡಿಸಿರುತ್ತದೆ. ದಿನಾಂಕ:16.07.2007 ರಿಂದ 15.04.2009ರವರೆಗೆ ಸದರಿ ಪ್ರಕರಣದ ಮೂಲ ಕಡತವನ್ನು ಮಾನ್ಯ ಜಿಲ್ಲಾ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ.27/05ರ ವಿಚಾರಣೆಗೆ ಸಲ್ಲಿಸಿರುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಎಂ.ಬಿ. ಪೂವಪ್ಪ, ವನಪಾಲಕ ಇವರನ್ನು ದಿನಾಂಕ:19.08.2006 ರಂದು ಕರೆಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ ನಾನು ನಗರ ವಲಯದ ಯಡೂರು ಶಾಖೆಯಲ್ಲಿ 1992–2004ರವರೆಗೆ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:21.01.1999 ರಂದು ನಾನು ನನ್ನ ಶಾಖೆಯಲ್ಲಿ ಗಸ್ತು ಮಾಡುತ್ತಿರುವಾಗ ನನಗೆ ಗೇಟ್ ವನಪಾಲಕ ಮತ್ತು ವಲಯ ಅರಣ್ಯಾಧಿಕಾರಿಗಳಿಂದ ಒಂದು ಶ್ರೀಗಂಧ ಕೊಂಡೊಯ್ಯುತ್ತಿರುವ ಲಾರಿ ತಪ್ಪಿಸಿಕೊಂಡು ಹೋಗುವ ಬಗ್ಗೆ ಮಾಹಿತಿ ತಿಳಿಯಿತು. ನಂತರ ನಾನು ನಮ್ಮ ಸಿಬ್ಬಂದಿಗಳಾದ ನಾಗಪ್ಪ, ಕರಿಬಸಪ್ಪ ಮತ್ತು ರಂಗಪ್ಪ ಎಂಬುವವರ ಜೊತೆಗೆ ಸದರಿ ಲಾರಿ ಹುಡುಕಲು ಹೊರಟೆವು. ಈ ರೀತಿಯಾಗಿ ನಾವು ಹುಡುಕುತ್ತಿದ್ದಾಗ ಹೆಬ್ಬುಲಿಗೆ ಮತ್ತು ನೇರಲುಗದ್ದೆಗೆ ಹೋಗುವ ಅಡ್ಡ ರಸ್ತೆಯಲ್ಲಿ ಒಬ್ಬ ಹಳ್ಳಿಯವನು ಸಿಕ್ಕಿ ಒಂದು ಲಾರಿ ಅಲ್ಲಿಗೆ ಬಂದು ಒಂದು ಮೋರಿ ಕೆಳಗೆ ಕೆಲವು ಚೀಲಗಳನ್ನು ಹಾಕಿ ಜೋರಾಗಿ ಹೋಗಿದ್ದನ್ನು ನೋಡಿ ಆ ಮೋರಿ ಬಳಿ ಕರೆದುಕೊಂಡು ಹೋಗಿ ತೋರಿಸಿದನು. ಮತ್ತು ಲಾರಿಯಲ್ಲಿ ಚಂದ್ರಶೆಟ್ಟಿ, ಸುನಿಲ್ ಮತ್ತು ಬಾಬಣ್ಣ ಎಂಬ ನಗರದ ವ್ಯಕ್ತಿಗಳು ಹೋದರೆಂದು ತಿಳಿಸಿದರು. ನಂತರ ಆ ಚೀಲಗಳನ್ನು ಬಿಚ್ಚಿ ನೋಡಿದಾಗ ಅವುಗಳಲ್ಲಿ ಶ್ರೀಗಂಧದ ತುಂಡುಗಳಿದ್ದು ಅವುಗಳನ್ನು ಅಳತೆ ಮಾಡಿ ಲೆಕ್ಕ ಮಾಡಿ ಮಹಜರ್ ತಯಾರಿಸಿದೆವು. ಲಾರಿಯ ಸಂಖ್ಯೆ: ಕೆಎ–20–2637 ಎಂದು ನಮ್ಮ ತನಿಖಾ ಠಾಣೆಯ ವನಪಾಲಕರಿಂದ ತಿಳಿದುಕೊಂಡೆನು. ನಂತರ ನನ್ನ ಜೊತೆಯಲ್ಲಿದ್ದ ತನಿಖಾ ಠಾಣೆಯ ಸಿಬ್ಬಂದಿಯೂ ಸಹ ಆ ಚೀಲಗಳನ್ನು ಗುರ್ತಿಸಿರುತ್ತಾರೆ. ನಂತರ ನಾವು ಮತ್ತು ತನಿಖಾ ಠಾಣೆಯ ಸಿಬ್ಬಂದಿ ಜೊತೆಗೂಡಿ ಲಾರಿ ಹುಡುಕುತ್ತಾ ಹೋದೆವು. ನಾವು ನಗರದ ಹತ್ತಿರ ಮುಂಡಳ್ಳಿ ಕ್ರಾಸ್ ಮತ್ತು ಸಾವೆಹಕ್ಲಿಗೆ ಹೋಗುವ ದಾರಿಯಲ್ಲಿ ಹೋಗುತ್ತಿರುವಾಗ ಅಲ್ಲಿ ಸ್ಥಳೀಯ ಜನರನ್ನು ವಿಚಾರಿಸಿದಾಗ ಚಂದ್ರಶೆಟ್ಟಿ ಎಂಬುವವರ ಲಾರಿಯು ಸಾವೆಹಕ್ಲು ಡ್ಯಾಂ ಕಡೆಗೆ ಜೋರಾಗಿ ಹೋಗಿರುವುದನ್ನು ನೋಡಿರುವುದಾಗಿ ತಿಳಿಸಿದರು. ನಾವು ಇದೇ ದಾರಿಯಲ್ಲಿ ಲಾರಿ ಹುಡುಕಿಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಮೈಸೂರು ಪೇಪರ್ ಮಿಲ್ಸ್ ನವರು ಮಾಡಿರುವ ನೆಡುತೋಪಿನಲ್ಲಿ 'ಖಾಲಿ ಬ್ಯಾರಲ್ ಬಿದ್ದಿರುವುದನ್ನು ನೋಡಿದೆವು. ಸದರಿ ಬ್ಯಾರಲ್‌ಗಳನ್ನು ತನಿಖಾ ಠಾಣೆಯ ಸಿಬ್ಬಂದಿ ಗುರ್ತಿಸಿ ಅವರು ಸದರಿ ಲಾರಿಯು ತನಿಖಾ ಠಾಣೆಯ ಮುಖಾಂತರ ತಪ್ಪಿಸಿಕೊಂಡು ಹೋಗುವಾಗ ಇವುಗಳನ್ನು ನೋಡಿರುವುದಾಗಿ ತಿಳಿಸಿದರು. ನಾವು ಸದರಿ ಖಾಲಿ ಬ್ಯಾರಲ್‌ಗಳನ್ನು ಅಮಾನತ್ತು ಪಡಿಸಿಕೊಂಡೆವು. ನಂತರ ನಾವು ನಗರಕ್ಕೆ ಬಂದು ಚಂದ್ರಶೆಟ್ಟಿ ಮನೆಯ ಬಳಿ ನೋಡಿದಾಗ ಸದರಿ ಲಾರಿ ನಿಂತಿರುವುದು ಕಂಡುಬಂದು ಅದನ್ನು ಅಮಾನತ್ತುಪಡಿಸಿ ಇಲಾಖಾ ವಶಕ್ಕೆ ತೆಗೆದುಕೊಂಡು ಈ ಎಲ್ಲಾ ಸ್ಥಳಗಳಲ್ಲೂ ಜಪ್ತುಮಾಡಿದ ಎಲ್ಲಾ ವಸ್ತುಗಳ ಬಗ್ಗೆ ಒಂದು ಮಹಜರ್ ತಯಾರಿಸಿದೆವು. ಇದನ್ನು ಗುರ್ತಿಸಿ ನಿಶಾನೆ ಪಿ1 ಎಂದು ನಮೂದಿಸಿದೆ. ಹಾಗೂ ಪ್ರಥಮ ವರ್ತಮಾನ ವರದಿಯನ್ನು ಸಹ ತಯಾರಿಸಿ ನ್ಯಾಯಾಲಯಕ್ಕೆ ಕಳಿಸಿರುತ್ತೇನೆ. ಇದನ್ನು ನಿಶಾನೆ ಪಿ2 ಎಂದು ಗುರ್ತಿಸಿದೆ ಮತ್ತು ಜಪ್ತು ವರದಿಯನ್ನೂ ಸಹ ಕಳಿಸಿಕೊಟ್ಟಿರುತ್ತೇನೆ. ಇದನ್ನು ನಿಶಾನೆ ಪಿ3 ಎಂದು ಗುರ್ತಿಸಿದೆ. ಸದರಿ ಲಾರಿಯು ಅಕ್ರಮವಾಗಿ ಶ್ರೀಗಂಧ ಕಳ್ಳ ಸಾಗಾಣಿಕೆ ಮಾಡಲು ತೊಡಗಿದ್ದರಿಂದ ಇದನ್ನು ಅಮಾನತ್ತು ಪಡಿಸಿಕೊಳ್ಳಲು ಕೋರಿಕೊಳ್ಳುತ್ತೇನೆ.

ವಕೀಲರು ಗೈರುಹಾಜರಾಗಿದ್ದು ಪಾಟೀಸವಾಲು ಇಲ್ಲ ಎಂದು ಪರಿಗಣಿಸಿ ಡಿಫೆನ್ಸ್ ಸಾಕ್ಷಿ ವಿಚಾರಣೆಗೆ ದಿನಾಂಕ ನಿಗದಿಪಡಿಸಲಾಯಿತು.

ಡಿಫೆನ್ಸ್ ಸಾಕ್ಷಿ ವಿಚಾರಣೆಗೆ ದಿನಾಂಕ:17.02.2007, 17.03.2007, 07.04.2007, 28.04.2007, 05.05.2007, 23.06.2007, 30.06.2007ರಂದು 7 ಬಾರಿ ದಿನಾಂಕ ನಿಗದಿಪಡಿಸಿದ್ದು, ಒಮ್ಮೆಯೂ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಇದರಿಂದ ವಾಹನ ಮಾಲೀಕರಿಗೆ ಈ ಪ್ರಕರಣದ ವಿಚಾರಣೆಗೆ ಹಾಜರಾಗಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಹಂತಕ್ಕೆ ದಿನಾಂಕ ನಿಗದಿಪಡಿಸಲಾಯಿತು.

ಡಿಫೆನ್ಸ್ ಕಡೆ ವಾದಕ್ಕೆ ದಿನಾಂಕ:25.04.2009, 27.06.2009, 18.07.2009 ರಂದು 3 ಬಾರಿ ದಿನಾಂಕವನ್ನು ನಿಗದಿಪಡಿಸಿದರು. ಸದರಿ ದಿನಾಂಕಗಳಂದು ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ಈ ಪ್ರಕರಣದ ವಸ್ತುಸ್ಥಿತಿ ನಿರ್ಧರಿಸಿ ಮುಂದಿನ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:18.07.2009ರಂದು ವಾದ ಮಂಡಿಸಿ ಈ ಪ್ರಕರಣದಲ್ಲಿ ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಕೆಎ–20–2637 ನ್ನು ಮಾಲು ಸಹಿತ ದಿನಾಂಕ:21.09.1999ರಂದು ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ವರದಿಯಲ್ಲಿ ಸಾಕ್ಷಿಗಳ ಸಹಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು

ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಸಾಕ್ಷಿಯ ಹೇಳಿಕೆಗೂ, ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳಿಗೂ ಹೋಲಿಕೆಯಾಗಿರುತ್ತದೆ. ಅಲ್ಲದೇ ಈ ವಾಹನಕ್ಕೆ ಘಟನಾ ದಿನ ನೇಮಿಸಿದ ಚಾಲಕನನ್ನು ಈ ನ್ಯಾಯಾಲಯಕ್ಕೆ ಡಿಫೆನ್ಸ್ ಕಡೆಯವರು ಕರೆಸಿ ಪೂರ್ಣ ಸಾಕ್ಷಿಯನ್ನು ಹೇಳಿಸಿರುವುದಿಲ್ಲ. ಹಾಗೂ ಆರ್.ಸಿ. ಮಾಲೀಕರು ಸಹಾ ಸಾಕ್ಷಿಯನ್ನು ನುಡಿದಿರುವುದಿಲ್ಲ. ಇದರಿಂದ ವಾಹನ ಮಾಲೀಕರು ಮುಗ್ದರೆಂದು ಮತ್ತು ತಮ್ಮ ಗಮನಕ್ಕೆ ಬರಲಿಲ್ಲ ಎನ್ನುವುದನ್ನು ಸಾಬೀತುಪಡಿಸಲು ಸಂಪೂರ್ಣ ವಿಫಲರಾಗಿರುತ್ತಾರೆ. ಅಲ್ಲದೇ ಇಂತಹುದೇ ಅಂಶವನ್ನು ಗಣನೆಗೆ ತೆಗೆದುಕೊಂಡು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕದ ರಿಟ್ ಪಿಟಿಷನ್ ನಂ.10144/2006ರ ದಿನಾಂಕ:23.10.2008ರ (ಶ್ರೀ ಹೆಚ್.ಟಿ. ಗಣೇಶ್ ಬಿನ್ ದಿ॥ ಚೋಮ ವಿರುದ್ಧ ಸ್ಟೇಟ್ ಆಫ್ ಕರ್ನಾಟಕ ರೆಪ್ರೆಸೆಂಟೆಡ್ ಬೈ ವಲಯ ಅರಣ್ಯಾಧಿಕಾರಿ, ಮತ್ತು ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ) ವಾಹನ ಮಾಲೀಕರ ಮನವಿಯನ್ನು ತಿರಸ್ಕರಿಸಿ ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ ವನ್ಯಜೀವಿ ವಿಭಾಗದ ಆದೇಶವನ್ನು ಎತ್ತಿಹಿಡಿದು ಆದೇಶವಾಗಿರುತ್ತದೆ. ಅಲ್ಲದೇ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) (2)ರ ಪ್ರಕಾರ ಮಾಲೀಕರು ವಾಹನದಲ್ಲಿ ಕಳ್ಳಸಾಗಾಣಿಕೆಗೆ ಉಪಯೋಗಿಸದಂತೆ ಮುನ್ನೆಚ್ಚರಿಕೆ ಕ್ರಮ ಜರುಗಿಸಬೇಕಾಗಿರುತ್ತದೆ. ಆದ್ದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿದೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1) ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು 407 ವಾಹನ ನಂ.ಕೆಎ–20–2637 ರಲ್ಲಿ ಶ್ರೀಗಂಧ 220 ಕೆ.ಜಿ.ಯನ್ನು ದಿನಾಂಕ:21.09.1999 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2) ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ 407 ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಹೌದು ಎಂದಾಗಿರುತ್ತದೆ.

**ಅಂಶ–1:**

ದಿನಾಂಕ:21.09.1999ರಂದು ನಗರ ವಲಯದ ಯಡೂರು ಶಾಖೆಯ ಮತ್ತು ಹುಲಿಕಲ್ ತನಿಖಾ ಠಾಣೆಯ ವನಪಾಲಕರು ತನಿಖಾ ಗೇಟಿನಲ್ಲಿ ಕಾಯುತ್ತಿರುವಾಗ ಮಧ್ಯಾಹ್ನ 1–45ರ ಸಮಯದಲ್ಲಿ ಟಾಟಾ 407 ಮಿನಿಲಾರಿ ಕೆಎ–20–2367 ರಲ್ಲಿ ಶ್ರೀಗಂಧ 220 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಶ್ರೀಗಂಧವನ್ನು ಹಾಜರುಪಡಿಸಿರುತ್ತಾರೆ. ಸಲ್ಲಿಸಿದ ದಾಖಲೆಗಳಿಗೂ ಮತ್ತು ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ತಾಳೆಯಾಗಿದ್ದು, ಇದರಿಂದ ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆ ಎಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ದಿವಂಗತ ಎನ್. ಗೋವಿಂದರಾಯ ನಾಯ್ಕ ಬಿನ್ ವಾಮನ ನಾಯ್ಕ, ಅಂಬಾನಿಲಯ ವಾಸಿ, ನೇರಳೇಗದ್ದೆ ಗ್ರಾಮ, ಕುರಕುಂಜಿ ಅಂಚೆ, ಕುಂದಾಪುರ ತಾ:, ಉಡುಪಿ ಜಿಲ್ಲೆ ಇವರು ದಿನಾಂಕ:22.12.1999 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ

ಪತ್ರವನ್ನು ದಿನಾಂಕ:12.01.2001 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿನಾಂಕ:25.06.2005ರಂದು ತಿರಸ್ಕರಿಸಿ ಆದೇಶವಾಗಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ.27/05ರಲ್ಲಿ ಮೇಲ್ಮನವಿ ಸಲ್ಲಿಸಿ ಸದರಿ ಅಪೀಲ್ ದಿನಾಂಕ:08.04.2009ರಲ್ಲಿ ವಾಹನ ಮಾಲೀಕರ ಮನವಿಯನ್ನು ತಳ್ಳಿಹಾಕಿ ಆದೇಶವಾಗಿದೆ. ಮತ್ತು ಆರ್.ಸಿ. ಮಾಲೀಕರು ಮೃತರಾದ ಬಗ್ಗೆ ಈ ನ್ಯಾಯಾಲಯಕ್ಕೆ ತಿಳಿಸಿದ ಮೇರೆಗೆ ಮೃತ ಆರ್.ಸಿ. ಮಾಲೀಕರ ವಾರಸುದಾರರು ಇದ್ದಲ್ಲಿ ನ್ಯಾಯಾಲಯಕ್ಕೆ ಎಲ್.ಆರ್.ಎಸ್. ಸಲ್ಲಿಸುವ ಬಗ್ಗೆ ಪೇಪರ್ ಪ್ರಕಟಣೆಯನ್ನು ದಿನಾಂಕ:04.12.2003ರಂದು ಹೊರಡಿಸಿದೆ. ದಿನಾಂಕ:12.12.2003ರಂದು "ವನಕೃಪ" ದಿನ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟವಾಗಿರುತ್ತದೆ. ಮತ್ತು ದಿನಾಂಕ:03.01.2004ರಂದು ಮೃತರ ವಾರಸುದಾರರಾದ ಶ್ರೀ ಎನ್. ವಾಮನ್ ನಾಯ್ಕ ಇವರು ಪ್ರಮಾಣ ಪತ್ರವನ್ನು ವಕೀಲರ ಮುಖಾಂತರ ಸಲ್ಲಿಸಿರುತ್ತಾರೆ. ಇವರ ಕ್ಲೈಮ್‌ನ ಬಗ್ಗೆ ತಕರಾರು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಿ ಪೇಪರ್ ಪ್ರಕಟಣೆಯನ್ನು ದಿನಾಂಕ:07.02.2005ರಂದು ಹೊರಡಿಸಿರುತ್ತದೆ. ಸದರಿ ಪ್ರಕಟಣೆಯು ದಿನಾಂಕ:15.02.2005ರಂದು "ಮನೋಭೂಮಿ" ದಿನಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ ಮತ್ತು ಡಿಫೆನ್ಸ್ ಸಾಕ್ಷಿ ಹೇಳಿಕೆಗೆ 7 ಬಾರಿ ದಿನಾಂಕ ನಿಗದಿಪಡಿಸಿರುತ್ತದೆ ಮತ್ತು ಡಿಫೆನ್ಸ್ ವಾದಕ್ಕೆ 3 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಒಮ್ಮೆಯೂ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ಪ್ರಕರಣದ ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿನಾಂಕ:21.09.1999 ರಂದು 407 ಮಿನಿಲಾರಿಯಲ್ಲಿ ಶ್ರೀಗಂಧ 220 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ನಗರ ವಲಯದ ಯಡೂರು ಶಾಖೆಯ ಮತ್ತು ಹುಲಿಕಲ್ ತನಿಖಾ ಠಾಣೆಯ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ನಗರ ಇವರು ವಿಚಾರಣಾ ವರದಿಯೊಂದಿಗೆ ಸಲ್ಲಿಸಿದ್ದಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿನಾಂಕ:22.12.1999 ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಈ ವಾಹನದಲ್ಲಿ ದಿನಾಂಕ:20.09.2009ರಂದು ಕುಂದಾಪುರದಿಂದ ಶಿವಮೊಗ್ಗಕ್ಕೆ ತೆಂಗಿನ ಕಾಯಿ ಕಳುಹಿಸುತ್ತಿದ್ದರು ಎನ್ನುವುದಕ್ಕಾಗಲೀ, ಈ ವಾಹನ ದುರಸ್ತಿಗೆ ಬಂದಿದೆ ಎನ್ನುವುದಕ್ಕಾಗಲೀ, ಅದನ್ನು ರಿಪೇರಿ ಮಾಡಿಸಲು ಹೊಸನಗರಕ್ಕೆ ಹೋದ ಬಗ್ಗೆಯಾಗಲೀ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ನಗರ ಇವರು ಜಪ್ತು ಮಾಡಿದ ವಾಹನ ಟಾಟಾ 407 ಮಿನಿ ಲಾರಿ ಕೆಎ–20–2637 ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಶ್ರೀಗಂಧದ 88 ತುಂಡುಗಳ ಒಟ್ಟು ತೂಕ 220 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ 407 ಮಿನಿ ಲಾರಿ ಸಂಖ್ಯೆ:ಕೆಎ–20–2637ನ್ನು ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ 88 ತುಂಡುಗಳ ಒಟ್ಟು ತೂಕ 220 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:01.08.2009ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

ಪಿ.ಆರ್.766

**MURUGAN OIL EXTRACTIONS PVT LTD.,**

**No.4, 2nd Floor, 3rd Main Road, Seshadripuram, Bangalore-560020**

**NOTICE OF THE CREDITOR'S MEETING**

Notice is hereby given, pursuant to section 500 of the Companies Act, 1956, that the meeting of the creditor of the above named company will be held at No.4, 2nd Floor, 3rd Main Road, Sheshadri Puram, Bangalore-560020, on 26.11.2009 At 10 AM for the purpose mentioned in section 500, 502, 503, 504 and 505 of the said Act. A Separate notice, enclosing a list of the creditors and the statement of financial position has been sent to all the creditors by post under certificate of posting.

Place:Bangalore — By order of the Board,

Date:22.10.2009 — Chairman/ Liquidator.

PD-69

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ**

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, ಮತ್ತು ಅಧ್ಯಕ್ಷರು, ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029**

**ಅಧಿಸೂಚನೆ**

**ಸಂಖ್ಯೆ:BLR-4/BAE/Exam/CR-18/2009-10, ದಿನಾಂಕ:27ನೇ ಅಕ್ಟೋಬರ್, 2009**

**ವಿಷಯ:** ಪ್ರಥಮ ಮತ್ತು ದ್ವಿತೀಯ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಕ್ರಮಾಂಕ: ಕಾಇ 4 ಕಾಬಾಸೇ 2009, ದಿನಾಂಕ:25.08.2009.

ಮುಂದಿನ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಯನ್ನು ನಡೆಸಲು ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿಯು ಉದ್ದೇಶಿಸಲಾಗಿದೆ. ಸದರಿ ಪರೀಕ್ಷೆಗೆ ವಿವಿಧ ಜಿಲ್ಲೆಗಳಿಂದ ಬರುವ ಅರ್ಜಿಗಳ ಸಂಖ್ಯೆಯ ಮೇಲೆ, ಪರೀಕ್ಷಾ ಸ್ಥಳವನ್ನು ಮತ್ತು ದಿನಾಂಕವನ್ನು ನಿಗದಿಪಡಿಸಿ ಅಭ್ಯರ್ಥಿಗಳಿಗೆ ತಿಳಿಸಲಾಗುವುದು.

ಆಸಕ್ತ ಅಭ್ಯರ್ಥಿಗಳು ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಮನವಿಯನ್ನು ಸ್ವವಿಳಾಸವುಳ್ಳ ಐದು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಲಕೋಟೆಯೊಂದಿಗೆ ಕಾರ್ಯದರ್ಶಿಗಳು, ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡ್ಯೆರಿ ವೃತ್ತದ ಬಳಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 ಇವರಿಗೆ ಸಲ್ಲಿಸಬೇಕು.

ಕನಿಷ್ಠ ಅರ್ಹತೆ

1) ಪ್ರಥಮ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಗೆ ಕುಳಿತುಕೊಳ್ಳಲಿಚ್ಚಿಸುವ ಅಭ್ಯರ್ಥಿಯ ವಯಸ್ಸು 21 ವರ್ಷಕ್ಕಿಂತ ಕಡಿಮೆ ಇರಬಾರದು ಮತ್ತು 500 ಚದರ ಅಡಿಗಿಂತ ಕಡಿಮೆ ಇರದ ಹೀಟಿಂಗ್ ಸರ್ಫೇಸ್ ಉಳ್ಳ ಬಾಯ್ಲರ್‌ನ ಮೇಲೆ ಎರಡು ವರ್ಷ ದ್ವಿತೀಯ ದರ್ಜೆ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಯ ಅರ್ಹತಾ ಪ್ರಮಾಣ ಪತ್ರ ಹೊಂದಿ ಕೆಲಸ ಮಾಡಿರಬೇಕು.

2) ದ್ವಿತೀಯ ದರ್ಜೆ ಅರ್ಹತಾ ಪ್ರಮಾಣ ಪತ್ರದ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷೆಗೆ ಅಭ್ಯರ್ಥಿಯ ವಯಸ್ಸು 20 ವರ್ಷಕ್ಕಿಂತ ಕಡಿಮೆ. ಇರಬಾರದು ಮತ್ತು ಯಾವುದಾದರೂ ಬಾಯ್ಲರ್ ಮೇಲೆ ಫೈರ್‌ಮನ್/ಅಸಿಸ್ಟೆಂಟ್ ಫೈರ್ಮನ್/ ಡಾಂಕಿ ಮ್ಯಾನ್ ಆಗಿ ಕನಿಷ್ಟ ಮೂರು ವರ್ಷ ಕೆಲಸ ಮಾಡಿರಬೇಕು.

3) ಅಭ್ಯರ್ಥಿಗಳು ಮೊದಲನೇ ಮತ್ತು ಎರಡನೇ ದರ್ಜೆ ಪರಿಷ್ಕೃತ ಪರೀಕ್ಷಾ ಶುಲ್ಕವನ್ನು ಡಿಡಿ ಅಥವಾ ಪೇ ಆರ್ಡರ್ ಅಥವಾ ಚಲನ್ ಮುಖಾಂತರ ಸಂದಾಯ ಮಾಡತಕ್ಕದ್ದು. ಡಿಡಿ ಅಥವಾ ಪೇ ಆರ್ಡರ್ ಅನ್ನು "Director of Factories and Boilers, Bangalore" ಅವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆಯತಕ್ಕದ್ದು. ಚಲನ್ ಮುಖಾಂತರ ಪರೀಕ್ಷಾ ಶುಲ್ಕವನ್ನು ಸಂದಾಯ ಮಾಡಿದಲ್ಲಿ 0230 ಲೇಬರ್ ಅಂಡ್ ಎಂಪ್ಲಾಯ್‌ಮೆಂಟ್, 103 ಫೀ ಫಾರ್ ಇನ್ಸ್‌ಪೆಕ್ಷನ್ ಆಫ್ ಸ್ಟೀಮ್ ಬಾಯ್ಲರ್ ಲೆಕ್ಕ ಶೀರ್ಷಿಕೆಯಲ್ಲಿ ಜಮಾ ಮಾಡತಕ್ಕದ್ದು.

ಮೊದಲನೇ ದರ್ಜೆ ಬಾಯ್ಲರ್ ಅಟೆಂಡೆಂಟ್ಸ್ ಪರೀಕ್ಷಾ ಶುಲ್ಕ ರೂ.100–00

ಎರಡನೇ ದರ್ಜೆ ಬಾಯ್ಲರ್ ಅಟೆಂಡೆಂಟ್ ಪರೀಕ್ಷಾ ಶುಲ್ಕ ರೂ.50–00

ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕಡೆಯ ದಿನಾಂಕ:30.11.2009 ಆಗಿರುತ್ತದೆ. ಹೆಚ್ಚಿನ ಮಾಹಿತಿಯನ್ನು ಸದರಿ ಕಛೇರಿಯಿಂದ ಪಡೆಯಬಹುದು.

**ಕೆ.ವಿ. ಪಾಲಯ್ಯ**

ಕಾರ್ಯದರ್ಶಿ,

ಬಾಯ್ಲರ್ ಅಟೆಂಡೆಂಟ್ ಪರೀಕ್ಷಾ ಮಂಡಳಿ, ಬೆಂಗಳೂರು.

ಪಿ.ಆರ್.1097

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–237/2008–09**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| ಶ್ರೀಮತಿ ವೀಣಾಬಾಯಿ ಕೋಂ ಲೇಟ್ ಜಿ.ಆರ್. ದೇಶಪಾಂಡೆ, ನಂ.38/50, 2ನೇ ಎ ಮುಖ್ಯರಸ್ತೆ, ಬಿ.ಎಸ್.ಕೆ. 3ನೇ ಹಂತ, ಆಂಜನೇಯ ದೇವಸ್ಥಾನದ ರಸ್ತೆ, ಇಟ್ಟಮಡು, ಶ್ರೀರಾಮನಗರ, ಬೆಂಗಳೂರು–560 035. | **ವಿರುದ್ಧ** | ಮುಖ್ಯ ಸಂಚಾರ ವ್ಯವಸ್ಥಾಪಕರು ಬಿ.ಎಂ.ಟಿ.ಸಿ. ಕೇಂದ್ರ ಕಛೇರಿ, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–560 027. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:22.01.2009 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ಪತಿ ಜಿ.ಆರ್. ದೇಶಪಾಂಡೆ ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 34 ವರ್ಷಗಳ ಸೇವೆಯ ನಂತರ, ಸೇವೆಯಲ್ಲಿರುವಾಗಲೇ ದಿನಾಂಕ:21.02.1996 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿವಸಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:02.11.2009

ಪಿ.ಆರ್.1096

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು, ಮತ್ತು
ನಿಯಂತ್ರಣಾಧಿಕಾರಿಗಳು, ಉಪಧನ ಪಾವತಿ
ಕಾಯ್ದೆ, ವಿಭಾಗ–4, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಕೋರ್ಟ್ ಸಮ್ಮನ್ಸ್**

**ಸಂಖ್ಯೆ: ಕಾನಪ/ಡಬ್ಲ್ಯೂಸಿಎ/ಸಿಆರ್–53/2009, ದಿನಾಂಕ:30ನೇ ಅಕ್ಟೋಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಶ್ರೀಮತಿ ನುಸರತ್ ಜಹಾನ್ ಕೋಂ ಲೇಟ್ ರಫೀಕ್ ಅಹಮದ್,<br>2) ಮೊಹಮ್ಮದ್ ಫಾರೂಕ್ ಬಿನ್ ಲೇಟ್ ರಫೀಕ್ ಅಹಮದ್,<br>3) ಹರ್‌ಶಿಯಾ ಬಾನು ಬಿನ್ ಲೇಟ್ ರಫೀಕ್ ಅಹಮದ್,<br>4) ಮಹಮ್ಮದ್ ಅನ್ವರ್ ಪಾಶ ಬಿನ್ ಲೇಟ್ ರಫೀಕ್ ಅಹಮದ್,<br>5) ಹಸ್‌ಫಿಯಾ ಬಾನು ಬಿನ್ ಲೇಟ್ ರಫೀಕ್ ಅಹಮದ್<br>6) ಅಸ್ಮಾ ಬಾನು ಬಿನ್ ಲೇಟ್ ರಫೀಕ್ ಅಹಮದ್,<br>7) ನಗ್ಮಾ ಬಾನು ಲೇಟ್ ರಫೀಕ್ ಅಹಮದ್,<br>ವಾಸ: ನುಸರತ್ ಬಹಾನ್, ಅನವಟ್ಟಿ, ಸೊರಬ ತಾಲ್ಲೂಕು. | ಉದಯ್ ಕುಮಾರ್ ಬಿನ್ ಸುಬ್ರಮಣ್ಯ ಪಿಳ್ಳೈ, ಪೈಂಟ್ ಕಂಟ್ರಾಕ್ಟರ್, ವಿನಾಯಕನಗರ, ಕಾಚಿನಕಟ್ಟೆ, ಶಿವಮೊಗ್ಗ ತಾ: |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ನುಸರತ್ ಜಹಾನ್ ಮತ್ತು ಇತರರು ಇವರು ಲೇಟ್ ರಫೀಕ್ ಅಹಮದ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ;15.07.2009 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಅಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಪಿ. ವಿಜಯ್ ದೇವ್ ನಾಯಕ್**

ಪಿ.ಆರ್.1099

ಕಾರ್ಮಿಕ ಪರಿಹಾರ ಆಯುಕ್ತರು,
ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪವಿಭಾಗ-2, ಮಂಡ್ಯ ಇವರ ನ್ಯಾಯಾಲಯ**
**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-5/2009, ದಿನಾಂಕ:28ನೇ ಅಕ್ಟೋಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಚೆನ್ನಾಜಮ್ಮ ವೈಫ್ ಆಫ್ ಕೃಷ್ಣಾಚಾರಿ, ಗೆಜ್ಜಲಗೆರೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 1) ಶ್ರೀಮತಿ ಜಬೀನಾ ವೈಫ್ ಆಫ್ ಇಲಿಯಾಜ್ ಶರೀಫ್ ನಂ.21, 1ನೇ ಎ ಕ್ರಾಸ್, ಗಂಗನಹಳ್ಳಿ, ನಾಯಂಡನಹಳ್ಳಿ, ಬೆಂಗಳೂರು-32.<br>2) ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಡಿ.ಓ.-2, ನ್ಯೂ ಮುಸ್ಲಿಂ ಹಾಸ್ಟೆಲ್ ಕಾಂಪ್ಲೆಕ್ಸ್, ಫೈರ್ ಬ್ರಿಗೇಡ್ ರಸ್ತೆ, ಸರಸ್ವತಿಪುರಂ, ಮೈಸೂರು. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:27.10.2009 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಪತಿ ಶ್ರೀ ಜಿ.ಕೆ. ನಾಗೇಂದ್ರ @ ಜಿ.ಕೆ. ನಾಗೇಂದ್ರ ಕುಮಾರ್ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮದ್ ಯೂಸುಫ್**

ಪಿ.ಆರ್.1104

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571401.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ-08/09**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) Padmavathi W/o Shanmugam<br>2) Suseela D/o Shanmugam<br>3) S. Majula D/o Shanmugam<br>R/o Door No.176, 9th cross, Indira Devi Compound, Vijaya Nagar BEML Nagar Post, Kolar Gold Fields-563115. | M/s BEML Management, K.G.F. |

**ಅಧಿಸೂಚನೆ**

ಗುತ್ತಿಗೆ ಕಾರ್ಮಿಕರಾದ ಶ್ರೀ ಶಣ್ಮುಗಂ, ಗುತ್ತಿಗೆ ಎಲೆಕ್ಟ್ರೀಷನ್ ಅವರು ಬಿ.ಇ.ಎಂ.ಎಲ್. ಕೆ.ಜಿ.ಎಫ್. ರಲ್ಲಿ ಕರ್ತವ್ಯ ನಿರತನಾಗಿದ್ದಾಗ ದಿನಾಂಕ:19.03.2009 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ನಷ್ಟ ಪರಿಹಾರದ ಬಾಬ್ತು ಠೇವಣಿಗೊಳಿಸಿ ಮೃತನ ಅವಲಂಬಿತರಾದ ಮೇಲ್ಕಂಡ 1 ರಿಂದ 3ನೇ ಅರ್ಜಿದಾರರೆಂದು ತೋರಿಸಿರುವವರಿಗೆ ಪರಿಹಾರ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಬಿಇಎಂಎಲ್ ಅವರು ಕೋರಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರನ್ನು ಸೇರಿದಂತೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರು ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಪ್ರಕರಣಕ್ಕೆ ಸಂಬಂಧಿಸಿದ ಇನ್ನಿತರೆ ಯಾವುದೇ ರೀತಿಯ ತಕರಾರು

ಇದ್ದರೆ, ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಮೇಲ್ಕಂಡ ಅರ್ಜಿದಾರರು ಸಹ ಅಧಿಕೃತವಾಗಿ ಅರ್ಜಿಸಲ್ಲಿಸಿ ಪರಿಹಾರದ ಹಣ ಪಡೆಯಲು ತಿಳಿಸಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ....... ರಂದು ನೀಡಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಉಪವಿಭಾಗ, ಕೋಲಾರ.

ಪಿ.ಆರ್.1100

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು ರಾಮನಗರ ಜಿಲ್ಲೆ, ರಾಮನಗರ ರವರ ನಡವಳಿಕೆಗಳು**

**ಪ್ರಕರಣ ಸಂಖ್ಯೆ: ರಾಜಿಕಾ/ಎಂಎಸ್ಸಿ/ ಕ್ಯೂಎಲ್517/09–10, ದಿನಾಂಕ:7ನೇ ಅಕ್ಟೋಬರ್, 2009**

**ವಿಷಯ:** ರಾಮನಗರ ಜಿಲ್ಲೆಯಲ್ಲಿ ಅಕ್ರಮ ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆಯನ್ನು ತಡೆಗಟ್ಟುವ ಬಗ್ಗೆ ಕೆಲವು ರಸ್ತೆಗಳಲ್ಲಿ ವಾಹನ ನಿಷೇಧ ಕುರಿತು.

**ಪ್ರಸ್ತಾವನೆ:**

ರಾಮನಗರ ಜಿಲ್ಲಾ ವ್ಯಾಪ್ತಿಯಲ್ಲಿ ಅಕ್ರಮ ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆಯನ್ನು ಅಧಿಕೃತವಾಗಿ ಸಕ್ಷಮ ಪ್ರಾಧಿಕಾರಿಗಳ ಪೂರ್ವಾನುಮತಿ ಪಡೆಯದೆ ಸಾಗಾಣಿಕೆ ಮಾಡುತ್ತಿರುವುದು ಜಿಲ್ಲಾಡಳಿತ ಗಮನಕ್ಕೆ ಬಂದಿದ್ದು, ಲಾರಿಗಳು ಹಾಗೂ ಟ್ರಾಕ್ಟರ್‌ಗಳಲ್ಲಿ ಪರವಾನಿಗೆಯನ್ನು ಪಡೆಯದೆ ರಾತ್ರಿ ವೇಳೆಯಲ್ಲಿ ಬೇರೆ ಕಡೆಗೆ ಸಾಗಾಣಿಕೆ ಮಾಡುತ್ತಿದ್ದು, ಲಾರಿಗಳು ಅತ್ಯಧಿಕ ಮಟ್ಟದಲ್ಲಿ ಮರಳನ್ನು ತುಂಬಿಕೊಂಡು ಸಾಗಾಣಿಕೆ ಮಾಡುತ್ತಿದ್ದು ಇದರಿಂದ ಮುಖ್ಯ ರಸ್ತೆಗಳು ಹಾಗೂ ಸಂಪರ್ಕ ರಸ್ತೆಗಳು ಹಾಳಾಗುತ್ತಿದ್ದು, ಇದಲ್ಲದೇ ರಾತ್ರಿ ವೇಳೆಯಲ್ಲಿ ವಾಹನಗಳು ಚಲಿಸುವುದರಿಂದ ಹಳ್ಳಿಯ ಜನರಿಗೆ ನಿದ್ರೆಗೆ ಭಂಗ ಉಂಟಾಗುವುದಲ್ಲದೆ, ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳಲ್ಲದೆ, ಅರ್ಕಾವತಿ, ಕಣ್ವನದಿಗಳ ಪರಿಸರದ ಮೇಲೆ ಹಾಗೂ ಮಂಚನಬೆಲೆ ಡ್ಯಾಮ್‌ಗಳಿಗೆ ದುಷ್ಪರಿಣಾಮ ಬೀರುತ್ತಿದೆ.

ಮುಂದುವರೆದು, ಈಗಾಗಲೇ ರಚನೆಗೊಂಡಿರುವ ಮೊಬೈಲ್ ಸ್ಕ್ವಾಡ್‌ಗಳು ಅಕ್ರಮ ಮರಳು ಸಾಗಾಣಿಕೆಯ ವಾಹನಗಳನ್ನು ತಪಾಸಣೆ ನಡೆಸಿ ವಾಹನಗಳ ವಿರುದ್ಧ ಪ್ರಕರಣ ದಾಖಲಿಸಿರುವುದು ಕಂಡು ಬಂದಿರುತ್ತದೆ. ಈಗಾಗಲೇ ಹಲವಾರು ಗ್ರಾಮ ಪಂಚಾಯಿತಿಗಳ ಸದಸ್ಯರುಗಳು ಇದರಿಂದ ಪರಿಸರಕ್ಕೆ ಆಗುವ ತೊಂದರೆಗಳನ್ನು ವಿವರಿಸಿರುತ್ತಾರೆ. ಒಟ್ಟಾರೆ ಅರ್ಕಾವತಿ, ಕಣ್ವ ನದಿ ಪಾತ್ರದಲ್ಲಿ, ಮಂಚನಬೆಲೆಯ ರಸ್ತೆಯಲ್ಲಿ ರಾತ್ರಿ ಹೊತ್ತು ಸಂಚರಿಸುತ್ತಾ ಪರಿಸರವನ್ನು, ರಸ್ತೆಯನ್ನು, ಹಳ್ಳಿಯ ಜನರ ಆರೋಗ್ಯ, ಪರಿಸರದ ಮೇಲೆ ಉಂಟಾಗುತ್ತಿರುವ ದುಷ್ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡು ರಾತ್ರಿಯ ವೇಳೆ ಮಂಚನಬೆಲೆಯಿಂದ ರಾಮನಗರಕ್ಕೆ ಬರುವ ರಸ್ತೆಗಳಲ್ಲಿ ಅಕ್ರಮ ಮರಳು ಸಾಗಿಸುವ ವಾಹನಗಳ ಸಂಚಾರವನ್ನು ನಿರ್ಬಂಧಿಸುವುದು ಸೂಕ್ತವೆಂದು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯನ್ನು ಮೇಲಿನ ವಿಷಯವಾರು ಪರಿಶೀಲನೆ ಹಾಗೂ ಮತ್ತಿತರೆ ವಾಸ್ತವಾಂಶಗಳನ್ನು ಗಮನದಲ್ಲಿಟ್ಟುಕೊಂಡು, ಜಿ.ಎಲ್.ಚಂದ್ರಶೇಖರಯ್ಯ, ಭಾ.ಆ.ಸೇ. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಮೋಟಾರು ವಾಹನ ಕಾಯಿದೆ 1988ರ ಕಲಂ 115 ರಡಿಯಲ್ಲಿ ಹಾಗೂ ಕರ್ನಾಟಕ ಮೋಟಾರು ವಾಹನ ನಿಯಮ 221ಎ(5) ಮತ್ತು ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಕಲಂ 70 ಮತ್ತು 73 ರಡಿಯಲ್ಲಿ ರಾಮನಗರ ಜಿಲ್ಲೆಯ ಮಂಚನಬೆಲೆ–ರಾಮನಗರ ಮಾರ್ಗ ಮಂಚನಬೆಲೆ–ರಾಮನಗರ ಕೆಂಪೇಗೌಡ ಸರ್ಕಲ್ (ಲಿಂಗೇಗೌಡನದೊಡ್ಡಿ ಹಾಗಲಹಳ್ಳಿ–ರಾಮಪುರ ಕಗ್ಗಲಹಳ್ಳಿ–ಹರಿಸಂದ್ರ ಹಳ್ಳಿಮಾಳ– ಕೆಂಪೇಗೌಡನದೊಡ್ಡಿ ಮಾರ್ಗ) ಕಣ್ವ–ರಾಮನಗರ ಕೆಂಪೇಗೌಡ ಸರ್ಕಲ್ ಕ್ಯಾಸಾಪುರ ಶ್ಯಾನುಭೋಗನಹಳ್ಳಿ–ಎರೆಹಳ್ಳಿ ಕೂಟಗಲ್ಲು ಹೊಸೂರು ಶ್ಯಾನುಬೋಗನಹಳ್ಳಿ ಮಾರ್ಗ ಮಂಚನಬೆಲೆ–ಮಾಯಗಾನಹಳ್ಳಿ ಮಂಚನಬೆಲೆ–ಸುಗ್ಗನಹಳ್ಳಿ ಮಾಯಗಾನಹಳ್ಳಿ–ಮಂಚನಬೆಲೆ–ಚಿಕ್ಕೇನಹಳ್ಳಿ–ಚಂದ್ರಪ್ಪ ಸರ್ಕಲ್ ದೊಡ್ಡಆಲದಮರ, ಮಂಚನಬೆಲೆ–ವಿ.ಜಿ.ದೊಡ್ಡಿ–ನಾಯ್ಕನಪಾಳ್ಯ–ಮಾಗಡಿ ಕೆಂಪೇಗೌಡನದೊಡ್ಡಿ, ರಾಮದೇವರಪಾದ–ಚಿಕ್ಕೇಗೌಡನದೊಡ್ಡಿ–ದೊಮ್ಮನಹಳ್ಳಿ–ಕಗ್ಗಲಹಳ್ಳಿ–ದೇವಿಸಿದ್ದೇಗೌಡನದೊಡ್ಡಿ–ಚಂದ್ರಪ್ಪ ಸರ್ಕಲ್–ದೊಡ್ಡಾಲದಮರ– ಈ ಮಾರ್ಗವಾಗಿ ಸಂಚರಿಸುವ ಎಲ್ಲಾ ಲಾರಿ ಮತ್ತು ಟ್ರಾಕ್ಟರ್ ವಾಹನಗಳ ಸಂಚಾರವನ್ನು ರಾತ್ರಿ 8.00 ಗಂಟೆಯಿಂದ ಬೆಳಿಗ್ಗೆ 7.00 ಗಂಟೆಯವರೆಗೆ ನಿಷೇಧಿಸಲಾಗಿದೆ ಎಂದು ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಗೆ ಬರುತ್ತದೆ ಮತ್ತು ಮುಂದಿನ ಆದೇಶದವರೆವಿಗೆ ಜಾರಿಯಲ್ಲಿರುತ್ತದೆ. ಮೋಟಾರ್ ವಾಹನ ಕಾಯಿದೆ 1988ರ ಕಲಂ 116 ರಡಿಯಲ್ಲಿ ಕರ್ನಾಟಕ ಮೋಟಾರು ವಾಹನಗಳ ನಿಯಮ 221ಎ(2) ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು ರಾಮನಗರ ಇವರು ಅವಶ್ಯವಿದ್ದ ಕಡೆ ಸೂಚನಾ ಫಲಕಗಳನ್ನು ಅಳವಡಿಸಿ ನಿಷೇಧವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು.

**ಜಿ.ಎಲ್. ಚಂದ್ರಶೇಖರಯ್ಯ, ಭಾ.ಆ.ಸೇ.**
ಜಿಲ್ಲಾಧಿಕಾರಿಗಳು, ಹಾಗೂ ಜಿಲ್ಲಾ ದಂಡಾಧಿಕಾರಿಗಳು,
ರಾಮನಗರ ಜಿಲ್ಲಾ, ರಾಮನಗರ.

ಪಿ.ಆರ್.1098

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–76/2009–10/526, ದಿನಾಂಕ:23ನೇ ಅಕ್ಟೋಬರ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಪಿ. ಸಾಯಮ್ಮ, ಸಾ: ಗಂಗಾಪುರ ತಾ: ಮುಂಡರಗಿ, ಜಿ: ಗದಗ. | **ವಿರುದ್ಧ** | 1) ದಿ ಜನರಲ್ ಮ್ಯಾನೇಜರ್, ವಿಜಯನಗರ ಶುಗರ್ ಫ್ಯಾಕ್ಟರಿ ಲಿ., ಗಂಗಾಪುರ ತಾ: ಮುಂಡರಗಿ, ಜಿ: ಗದಗ. |
| 2) ಪಿ. ದೀನಬಂಧು, ಸಾ: ಗಂಗಾಪುರ ತಾ: ಮುಂಡರಗಿ, ಜಿ:ಗದಗ. | | 2) ಯುನೈಟೆಡ್ ಇನ್ಸೂರೆನ್ಸ್ ಕಂ.ಲಿ., ತೋಂಟದಾರ್ಯ ವಿದ್ಯಾಪೀಠ ಬಿಲ್ಡಿಂಗ್, ರೋಟರಿ ಸರ್ಕಲ್, ಗದಗ. |

**ಪ್ರಕಟಣೆ**

ಅರ್ಜಿದಾರರಾದ (1) ಶ್ರೀ:ಶ್ರೀಮತಿ ಪಿ.ಸಾಯಮ್ಮ (2) ಪಿ. ದೀನಬಂದು ಸಾ:ಗಂಗಾಪುರ, ತಾ:ಮುಂಡರಗಿ, ಜಿ:ಗದಗ, ಇವರು ತಾವು ಮೃತ ಲಕ್ಷ್ಮಣ ಪಿ. ದೀನಬಂದು ಇವರ ತಾಯಿ ಮತ್ತು ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಲಕ್ಷ್ಮಣ ಪಿ.ದೀನಬಂದು ಇವರು ಒಂದನೇ ಪ್ರತಿವಾದಿಗಳಾದ ದಿ ಜನರಲ್ ಮ್ಯಾನೇಜರ್ ವಿಜಯನಗರ ಶುಗರ್ ಫ್ಯಾಕ್ಟರಿ ಲಿ., ಗಂಗಾಪುರ ತಾ: ಮುಂಡರಗಿ, ಇವರಲ್ಲಿ ......... ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–77/2009/531, ದಿನಾಂಕ:23ನೇ ಅಕ್ಟೋಬರ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಷಣ್ಮುಕಪ್ಪ ಶಿವಲಿಂಗಪ್ಪ ಹಲಗಟ್ಟಿ R/o ಹದ್ಲಿ ತಾ: ನರಗುಂದ, ಜಿ:ಗದಗ. | **ವಿರುದ್ಧ** | 1) ವೆಂಕಟೇಶ ಹನುಮಂತಪ್ಪ ಕೊರವರ, R/o ಗಂಗಾಧರ ನಗರ, ಸೆಟ್ಲಮೆಂಟ್, 8ನೇ ಕ್ರಾಸ್, ಹುಬ್ಬಳ್ಳಿ. |
| | | 2) ದಿ ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಕಿಟಲ್ ಕಾಲೇಜ್ ಹತ್ತಿರ, ಧಾರವಾಡ. |

**ಪ್ರಕಟಣೆ**

ಅರ್ಜಿದಾರರಾದ (1) ಶ್ರೀ: ಷಣ್ಮುಕಪ್ಪ ಶಿವಲಿಂಗಪ್ಪ ಹಲಗಟ್ಟಿ, ಸಾ:ಹದ್ಲಿ, ತಾ:ನರಗುಂದ ಜಿ:ಗದಗ, ಇವರು ತಾವು ಮೃತ ಮಂಜುನಾಥ ಹಲಗಟ್ಟಿ ಇವರ ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜುನಾಥ ಹಲಗಟ್ಟಿ ಇವರು ಒಂದನೇ ಪ್ರತಿವಾದಿಗಳಾದ ವೆಂಕಟೇಶ ಹನುಮಂತಪ್ಪ ಕೊರವರ R/o ಗಂಗಾಧರನಗರ, ಹುಬ್ಬಳ್ಳಿ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್.1084

## ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀ ಎಂ.ವಿ. ಕಲ್ಲೂರುಮಠ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮಾಲೂರು ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:** 1) ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ ಇವರ ಪತ್ರಸಂಖ್ಯೆ: ಸಿಬ್ಬಂದಿ–1/ಕೃಸ/ಅಗೈಹಾ–5/2002–03, ದಿನಾಂಕ:28/31.05.2002.

2) ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ–2/ಎಎ/ಎಇಪಿ(1)2 ಮಾಹೊ/26, 2002–03, ದಿನಾಂಕ:10.06.2002.

3) ಈ ಕಛೇರಿಯ ಸೂಚನ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:04.03.2003.

4) ಶ್ರೀ ಎಂ.ವಿ. ಕಲ್ಲೂರುಮಠ, ಕೃಷಿ ಸಹಾಯಕ, ಇವರ ಸ್ವೀಕೃತಿ ಪತ್ರ ದಿನಾಂಕ:21.05.2003.

5) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:24.07.2003.

6) ಸಹಾಯಕ ಕೃಷಿ ನಿರ್ದೇಶಕರು, ಮಾಲೂರು ಇವರ ಪತ್ರ ಸಂಖ್ಯೆ: ಸಕೃನಿ–ಮಾ/ಸಿಬ್ಬಂದಿ/ಕೃಸ/ಅಗೈಹಾ/ಎಂ.ವಿ.ಕ/2002–03, ದಿನಾಂಕ:05.08.2003.

7) ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:22–9/08–10.2003.

8) ಆರೋಪಿತರ ಸ್ವೀಕೃತಿ ಪತ್ರ ದಿನಾಂಕ:04.11.2003.

9) ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:23.10.2003.

10) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–7/11/2002–03, ದಿನಾಂಕ:16.02.2004.

11) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:27–4/08.06.2006.

12) ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:17.07.2006 ಹಾಗೂ 08.07.2008.

13) ಸಹಾಯಕ ಕೃಷಿ ನಿರ್ದೇಶಕರು ಜಲಾನಯನ ಅಭಿವೃದ್ಧಿ ಇಲಾಖಾ ರಾಣಿಬೆನ್ನೂರು ಇವರ ಪತ್ರ ದಿನಾಂಕ:06.08.2007 ಮತ್ತು 19.08.2008.

**ಪ್ರಸ್ತಾವನೆ:**

ಶ್ರೀ ಎಂ.ವಿ. ಕಲ್ಲೂರುಮಠ, ಕೃಷಿ ಸಹಾಯಕ, ಹಿಂದಿನ ರೈತ ಸಂಪರ್ಕ ಕೇಂದ್ರ ಕಮಲಾಪುರ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಲ್ಬರ್ಗಾ ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮಾಲೂರು, ಕೋಲಾರ ಜಿಲ್ಲೆ ಇವರು ರೈತ ಸಂಪರ್ಕ ಕೇಂದ್ರ ಕಮಲಾಪುರ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:13.06.2001 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಓದಲಾದ ಕ್ರ.ಸಂ.(1) ರ ಪತ್ರ ಮುಖೇನ ಜಂಟಿ ಕೃಷಿ ನಿರ್ದೇಶಕರು ಗುಲ್ಬರ್ಗಾ ರವರು ಶಿಸ್ತುಕ್ರಮ ಕೈಗೊಳ್ಳುವಂತೆ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಆರೋಪಿತರು ಕರ್ತವ್ಯಕ್ಕೆ ಗೈರು ಹಾಜರಾಗಿರುವುದು ಮೇಲ್ನೋಟಕ್ಕೆ ಕಂಡುಬಂದ ಹಿನ್ನೆಲೆಯಲ್ಲಿ ಇವರ ವಿರುದ್ಧದ ಆರೋಪಗಳ ಬಗ್ಗೆ ಓದಲಾದ ಕ್ರ.ಸಂ. (3)ರ ಪತ್ರದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಅಡಿಯಲ್ಲಿ ಅನುಬಂಧ–1 ರಿಂದ 4 ನ್ನು ಜಾರಿ ಮಾಡಲಾಯಿತು. ಈ ದೋಷಾರೋಪಣೆ ಪಟ್ಟಿ ತಲುಪಿದ 15 ದಿನಗಳೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು, ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿಯನ್ನು ಓದಲಾದ ಕ್ರ.ಸಂ.(4)ರಲ್ಲಿ ನೌಕರರು ದಿನಾಂಕ:21.05.2003ರಲ್ಲಿ ಸ್ವೀಕರಿಸಿರುವ ಸ್ವೀಕೃತಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಇಲಾಖಾ ಸೂಚನಾ ಪತ್ರವನ್ನು ಸ್ವೀಕರಿಸಿ ನಿಗದಿತ ಅವಧಿಯೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿ ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣೆ ನಡೆಸಲು ನಿರ್ಧರಿಸಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ಓದಲಾದ ಕ್ರಮಸಂಖ್ಯೆ (5)ರಲ್ಲಿ ನೇಮಿಸಿ ಆದೇಶಿಸಿದೆ.

ಮುಂದುವರೆಸುತ್ತ ಶ್ರೀ ಎಂ.ವಿ. ಕಲ್ಲೂರುಮಠ, ಕೃಷಿ ಸಹಾಯಕ, ಇವರು ರೈತ ಸಂಪರ್ಕ ಕೇಂದ್ರ ಲಕ್ಕೂರು, ಸಹಾಯಕ ಕೃಷಿ ನಿರ್ದೇಶಕರ ಮಾಲೂರು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:13.11.2002 ರಿಂದ 26.11.2002 ಮತ್ತು 11.12.2002 ರಿಂದ 20.05.2003 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಓದಲಾದ ಕ್ರ.ಸಂ. (6)ರ ಪತ್ರದಲ್ಲಿ ಸಹಾಯಕ ಕೃಷಿ ನಿರ್ದೇಶಕರು ಮಾಲೂರು ಇವರು ಶಿಸ್ತುಕ್ರಮ ಕೈಗೊಳ್ಳುವಂತೆ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಆರೋಪದ ಬಗ್ಗೆ ಓದಲಾದ ಕ್ರ.ಸಂ.(7) ರಲ್ಲಿ ಇಲಾಖಾ ಪತ್ರದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಅಡಿಯಲ್ಲಿ ಹೆಚ್ಚುವರಿ ದೋಷಾರೋಪಣ ಪಟ್ಟಿ ಅನುಬಂಧ–1 ರಿಂದ 4 ನ್ನು ಜಾರಿ ಮಾಡಲಾಯಿತು. ಈ ದೋಷಾರೋಪಣೆ ಪಟ್ಟಿ ತಲುಪಿದ 15 ದಿನಗಳೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿಯನ್ನು

ಓದಲಾದ ಕ್ರ.ಸಂ. (8) ರಲ್ಲಿ ಸ್ವೀಕರಿಸಿ ನೌಕರರು ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಈ ಅವಧಿಯು ಸೇರಿದಂತೆ ಮೊದಲನೆಯ ಅವಧಿಯ ಬಗ್ಗೆಯು ವಿಚಾರಣೆ ನಡೆಸಿ ವರದಿ ಸಲ್ಲಿಸಲು ಓದಲಾದ ಕ್ರಮಸಂಖ್ಯೆ (9) ರಲ್ಲಿ ಇಲಾಖಾ ಪತ್ರದಲ್ಲಿ ಸೂಚಿಸಲಾಗಿತ್ತು. ಈ ಮಧ್ಯ ನೌಕರರು ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಜಲಾನಯನ ಅಭಿವೃದ್ಧಿ ಇಲಾಖೆ ರಾಣಿಬೆನ್ನೂರು ಕಛೇರಿಗೆ ವರ್ಗಾವಣೆ ಹೊಂದಿರುತ್ತಾರೆ. ಸದರಿ ನೌಕರರು ಹಾವೇರಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಅವರ ಮನವಿಯ ಮೇರೆಗೆ ಓದಲಾದ ಕ್ರಮಸಂಖ್ಯೆ (10)ರ ಇಲಾಖಾ ಆದೇಶದಲ್ಲಿ ಜಂಟಿ ಕೃಷಿ ನಿರ್ದೇಶಕರು ಹಾವೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ. ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಓದಲಾದ ಕ್ರಮ ಸಂಖ್ಯೆ (11)ರಲ್ಲಿ ವಿಚಾರಣಾ ವರದಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಓದಲಾದ ಕ್ರಮಸಂಖ್ಯೆ (3) ಮತ್ತು (7) ರಲ್ಲಿ ಜಾರಿ ಮಾಡಿರುವ ದೋಷಾರೋಪಣಾ ಪಟ್ಟಿಯಲ್ಲಿರುವ ಆರೋಪಗಳನ್ನು ಒಳಗೊಂಡಿದೆ. ವಿಚಾರಣಾ ವರದಿಯಲ್ಲಿ ಆರೋಪವು ಸಾಕ್ಷಿ ಹಾಗೂ ದಾಖಲಾತಿಗಳ ಆಧಾರದ ಮೇರೆಗೆ ರುಜುವಾತು ಆಗಿರುತ್ತದೆ. ಓದಲಾದ ಕ್ರಮಸಂಖ್ಯೆ (12) ರಲ್ಲಿ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ವಿಚಾರಣಾ ವರದಿಯೊಂದಿಗೆ ಆಪಾದಿತ ನೌಕರರಿಗೆ ಜಾರಿ ಮಾಡಲಾಯಿತು. ಸೂಚನಾ ಪತ್ರವನ್ನು ಸ್ವೀಕರಿಸಿರುವ ಬಗ್ಗೆ ಓದಲಾದ ಕ್ರಮ ಸಂಖ್ಯೆ (13)ರಲ್ಲಿ ಸಹಾಯಕ ಕೃಷಿ ನಿರ್ದೇಶಕರು ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು ಇವರು ದೃಢೀಕರಿಸಿರುತ್ತಾರೆ. ವಿಚಾರಣಾ ವರದಿಯನ್ನು ಪಡೆದು ನೌಕರರು ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ. ವಿಚಾರಣಾ ವರದಿಯಲ್ಲಿ ಆರೋಪ ಸಾಭೀತಾಗಿರುವುದರಿಂದ ಇವರ ಆರೋಪ ಗಂಭೀರವಾಗಿ ಪರಿಗಣಿಸಿ ಓದಲಾದ ಕ್ರಮಸಂಖ್ಯೆ (11)ರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸದರಿಯವರನ್ನು ಆರೋಪಿ ಎಂದು ಪರಿಗಣಿಸಿ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–6/11/2002–03, ದಿನಾಂಕ:24ನೇ ಅಕ್ಟೋಬರ್, 2009**

ಈ ಕೆಳಗೆ ಸಹಿ ಮಾಡಿರುವ ಡಾ: ಬಾಬುರಾವ್ ಮುಡಬಿ, ಭಾ.ಆ.ಸೇ. ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿ, ಬೆಂಗಳೂರು, ಆದ ನಾನು ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎಂ.ವಿ. ಕಲ್ಲೂರುಮಠ, ಕೃಷಿ ಸಹಾಯಕ, ಹಿಂದಿನ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮಾಲೂರು ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು ಇವರನ್ನು ಆರೋಪಿ ಎಂದು ಪರಿಗಣಿಸಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ "ಕಡ್ಡಾಯ ನಿವೃತ್ತಿ"ಗೊಳಿಸಿ ಆದೇಶಿಸಿರುತ್ತೇನೆ.

ಸದರಿಯವರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಆದೇಶಿಸಿರುತ್ತೇನೆ.

**ಡಾ: ಬಾಬುರಾವ್ ಮುಡಬಿ**

ಪಿ.ಆರ್.1103 ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 739 ಹೆಚ್‌ಎಸ್‌ಹೆಚ್ 2008 (ಭಾ), ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2009**

ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ:27.11.2008 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ/72/ಆರ್‌ಟಿಬಿ/2007ರಲ್ಲಿ ಆಯ್ಕೆಯಾದ ಪದವೀಧರ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ರೂ.14050–350–14400–400–16800–450–19500–525–22650–600–25050 ಗಳ ವೇತನ ಶ್ರೇಣಿಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09.01.2009 ರಂದು ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ನೇಮಿಸಲಾಗಿತ್ತು.

ಆದರೆ, ಅನುಬಂಧದಲ್ಲಿ ನಮೂದಿಸಿರುವ 129 ಅಭ್ಯರ್ಥಿಗಳು ನೇಮಕಾತಿ ನೀಡಿದ ಸ್ಥಳದಲ್ಲಿ ನಿಗದಿತ ಕಾಲಾವಧಿಯೊಳಗೆ ಕಾರ್ಯವರದಿ ಮಾಡಿಕೊಳ್ಳದೇ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1997ರ ನಿಯಮ 18(3)ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಸದರಿ ಅಭ್ಯರ್ಥಿಗಳ ನೇಮಕಾತಿಯನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ANNEXURE TO NOTIFICATION NO:HFW 739 HSH 2008 DATED: 27.10.2009**

| Sl. No. | Rank Sl. No. | Name and Address | PLACE OF POSTING |
|---|---|---|---|
| | 1 | 2 | 3 |
| 1. | 1 | KAMALA.G.R.<br>C\O NANDA KUMAR SURESH NILAYA SIDDI VINAYAKA ROAD 2-CROSS, 2-LINK ,PANDITH HOUSE, MANGALORE PIN:574813 | PHC., NELLIKARU, MANGALORE DIST |
| 2. | 2 | RAVIKANT<br>H.NO - 6186/40 BASAVA NIVAS HIREMATH COLONY BASAVAKALYAN POST BIDAR DIST PIN:585327 | PHC., KAMALAPUR, GULBARGA TQ .,DIST |
| 3. | 7 | SOUMYA.S.M<br>NO.S-85,3RD CROSS,3RD MAIN ,2ND STAGE,SRIRAMPURAM MYSORE PIN:570023 | PHC CHINYA, NAGAMANGALA TQ., MANDYA |
| 4. | 9 | BHIMAPPA INGALAGERI<br>C/O DR.NAVEEN B , ROOM NO 16,ABMM HOSTEL SHANTI COLONY , VIDYANAGAR,HUBLI PIN:580021 | PHC GARAGA, DHARWAR DIST |
| 5. | 12 | VIVEKA S<br>NO 34, KHB COLONY, KUVEMPU NAGAR, KOLAR PIN:563101 | PHU SIRGOD, HANAGAL |
| 6. | 18 | RAGHAVENDRA.K.P<br>NO.3,KYATAGONDANA HALLY,MIDIGESI(HOBLI) MADHUGIRI (TQ) PIN:572133 | PHC., M. HOSAHALLI., HASSAN |
| 7. | 19 | SWETHA R VERNEKAR<br>C/O PREMA VERNEKAR H.NO.27 OIT ROAD SHANTI COLONY VIDYANAGAR HUBLI PIN:580027 | PHC, DHARWAD |
| 8. | 24 | JAYA KUMAR J K<br>SHAPUR VILLAGE KOLAR TALUK PIN:563101 | PHC BASRUR, KUNDAPUR TQ., UDUPI |
| 9. | 28 | SOUMYA A VASTRAD<br>C/O DR.A.G.VASTRAD, P.G.HOSPITAL, SIRSI, UTTARA KANNADA | PHC HATTIKERI, ANKOLA TQ., KARWAR DIST |
| 10. | 40 | DHANALAKSHMI R<br>NO.74 SHARADHA NILAYA SOMESHWARA EXTENSION DODDABALLAPUR PIN:561203 | PHC HOSARITTI, HAVERI |
| 11. | 42 | ASHWINI RANI.M<br>"KALPATHARU" KT 628 13TH CROSS CHAMUNDESHWARI NAGAR MANDYA PIN:571401 | PHC KIKKERI., K.R PETE TQ., MANDYA |

ಸಮರ್ಥಿಸಿಕೊಳ್ಳಲು 0–21 ಗುಂಟೆಗೆ ತಯಾರಿಸಿರುವ ಮೂಲ ಟಿಪ್ಪಣಿಯನ್ನು ಗೈರು ವಿಲೇ ಮಾಡಿರುವುದು ಕಂಡುಬಂದಿರುತ್ತದೆ. ಇದರಿಂದಾಗಿ ಸ.ನಂ.145 ರ ಹಕ್ಕುದಾರರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಸರ್ಕಾರಿ ಜಾಗವನ್ನು ಸೇರಿಸಿ ಟಿಪ್ಪಣಿ ತಯಾರಿಸಿ, ಕರ್ತವ್ಯ ಚ್ಯುತಿ ಎಸಗಿ ಅಕ್ರಮ ತಿದ್ದುಪಡಿ ಮಾಡಲು ಸಹಕರಿಸಿರುವುದು ಸ್ಪಷ್ಟವಾಗುತ್ತದೆ. ಇದರಿಂದ ಕಛೇರಿ ಕೈಪಿಡಿಯ ಕಂಡಿಕೆ 8(ಎ) ಹಾಗೂ ಮಾನ್ಯ ನಿರ್ದೇಶಕರವರ ಸುತ್ತೋಲೆಯ ನಿರ್ದೇಶನ ಮತ್ತು ಕೆ.ಸಿ.ಎಸ್.(ನಡತೆ) ನಿಯಮ 1966 ರ ನಿಯಮ 3(i)( ii) ಮತ್ತು (iii) ನ್ನು ಉಲ್ಲಂಘಿಸಿ ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ ಕ.ಸ.ಸೇ(ವ.ನಿ. ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

ಆಪಾದಿತ ನೌಕರರು ಸದರಿ ಆರೋಪ ಪಟ್ಟಿಯನ್ನು ದಿನಾಂಕ:26.05.2004 ರಂದು ಸ್ವೀಕರಿಸಿ, ದಿನಾಂಕ:16.06.2004 ರಂದು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಯಲ್ಲಿ ಅವರ ವಿರುದ್ಧ ಮಾಡಲಾದ ಆರೋಪವನ್ನು ತಿರಸ್ಕರಿಸಿರುವ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರ ನಡವಳಿ ದಿನಾಂಕ:25.01.2005 ರ ಪ್ರಕಾರ ವಿಚಾರಣಾಧಿಕಾರಿಗಳು, ತಂಡ–2, ನಗರಮಾಪನ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರು, ದೊಡ್ಡಬಳ್ಳಾಪುರ ಕಛೇರಿಯ ಅಧೀಕ್ಷಕರು(ಆ) ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ. ಅದರಂತೆ ವಿಚಾರಣೆ ಪ್ರಾರಂಭದ ಹಂತದಲ್ಲಿದ್ದಾಗಲೇ ವಿಭಾಗ ಮಟ್ಟದ ಕಛೇರಿಗಳು ರದ್ದಾಗಿ, ಈ ಇಲಾಖೆಯು ಕಂದಾಯ ಇಲಾಖೆಯೊಂದಿಗೆ ಕಾರ್ಯ ವಿಲೀನಗೊಂಡ ಕಾರಣ, ಹಾಗೂ ವಿಚಾರಣಾಧಿಕಾರಿಗಳು ನಗರಮಾಪನ ತಂಡ–2 ಬೆಂಗಳೂರು ರವರ ಪತ್ರದ ದಿನಾಂಕ:18.12.2005 ರಲ್ಲಿ ಕೋರಿದಂತೆ ಭೂದಾಖಲೆಗಳ ಸಹಾಯಕ ನಿರ್ದೇಶಕರು(ಆ) ಉಗ್ರಾಣ ಶಾಖೆ, ಕೇಂದ್ರ ಕಛೇರಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ, ಭೂದಾಖಲೆಗಳ ಸಹಾಯಕ ನಿರ್ದೇಶಕರು ಬೆಂಗಳೂರು ಕಛೇರಿಯು ಸಹ ಕಾರ್ಯ ವಿಲೀನದ ಕಾಲದಲ್ಲಿ ರದ್ದುಗೊಂಡಿದ್ದರಿಂದ ಸಾಕ್ಷಿದಾರರನ್ನಾಗಿ ತಹಸೀಲ್ದಾರ್ ಕಚೇರಿಯ ಉತ್ತರ ತಾಲ್ಲೂಕು ಪರ್ಯಾವೇಕ್ಷಕರನ್ನು ಹಾಜರುಪಡಿಸಿಕೊಳ್ಳಲು ಸೂಚಿಸಿದಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ದಿನಾಂಕ:25.11.2008 ರಂದು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ನಕಲುಗಳನ್ನು ವಿತರಿಸುವಾಗ ತಪಾಸಕರಾಗಿ ಮತ್ತು ಅಭಿಲೇಖಾಲಯದ ವಿಷಯ ನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಮೂಲ ದಾಖಲೆಗಳಲ್ಲಿ ಮೇಲ್ನೋಟಕ್ಕೆ ಕಂಡುಬಂದಿರುವ ವ್ಯತ್ಯಾಸಗಳನ್ನು ಗಮನಿಸಿ ಸರಿಪಡಿಸುವ ಬಗ್ಗೆ ಹೆಚ್ಚಿನ ಪರಿಶೀಲನೆ ನಡೆಸಿ ಗೈರುವಿಲೇಯಾದ ಬಗ್ಗೆ ಮತ್ತು ನ್ಯೂನ್ಯತೆಯನ್ನು ಸರಿಪಡಿಸುವ ನಿಟ್ಟಿನಲ್ಲಿ ಮೇಲಾಧಿಕಾರಿಗಳ ಗಮನಕ್ಕೆ ತರದೇ ನಕಲನ್ನು ವಿತರಿಸಿರುವುದು ಜವಾಬ್ದಾರಿಯುತ ನೌಕರನ ಕರ್ತವ್ಯಕ್ಕೆ ವಿರುದ್ಧವಾದ ವರ್ತನೆಯಾಗಿದ್ದು, ಅಲ್ಲದೆ ಆಕಾರಬಂದನ್ನು ಸಹಿ ಮಾಡಿರುವುದು ತಪ್ಪಾಗಿರುತ್ತದೆಯೆಂದು ಆಪಾದಿತ ನೌಕರರೆ ವಿಚಾರಣೆ ವೇಳೆಯಲ್ಲಿ ಹೇಳಿಕೆಯಲ್ಲಿ ಆಕಾರಬಂದು ಸಹಿ ಮಾಡಿರುವುದು ತನ್ನ ತಪ್ಪಾಗಿರುತ್ತದೆಯೆಂದು ಒಪ್ಪಿಕೊಂಡಿರುತ್ತಾರೆಂದು, ಈ ಎಲ್ಲಾ ಕಾರಣಗಳಿಂದ ಆರೋಪಿತ ನೌಕರರ ಕರ್ತವ್ಯಲೋಪ ಸಾಬೀತಾಗಿರುತ್ತದೆ ಎಂಬುದಾಗಿ ಅಭಿಪ್ರಾಯವನ್ನು ನೀಡಿರುತ್ತಾರೆ.

ಆಪಾದಿತ ನೌಕರರ ವಿರುದ್ಧದ ಆರೋಪ ಸಾಬೀತಾದ ಕಾರಣ ಎರಡನೇ ಕಾರಣ ಕೇಳಿ ನೋಟೀಸನ್ನು ದಿನಾಂಕ:10.12.2008 ರ ಪ್ರಕಾರ ವಿಚಾರಣಾ ವರದಿಯ ಪ್ರತಿಯೊಂದಿಗೆ ಜಾರಿ ಮಾಡಿರುವುದನ್ನು ದಿನಾಂಕ:30.12.2008 ರಂದು ಆಪಾದಿತ ನೌಕರರು ಸ್ವೀಕರಿಸಿ, ಆದರೆ ಸದರಿ ನೋಟೀಸಿಗೆ ಯಾವುದೇ ಲಿಖಿತ ಹೇಳಿಕೆಯನ್ನು ಇದುವರೆವಿಗೂ ಸಲ್ಲಿಸಿರುವುದಿಲ್ಲ.

ಪ್ರಕರಣದಲ್ಲಿನ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ವಿಚಾರಣಾ ದಾಖಲಾತಿಗಳೊಂದಿಗೆ ಪರಿಶೀಲಿಸಿದಾಗ ಆಪಾದಿತ ನೌಕರರು ಮೂಲ ಟಿಪ್ಪಣಿಯ ನಕಲನ್ನು ದಿನಾಂಕ:24.02.2003 ರಂದು ವಿತರಿಸಿರುತ್ತಾರೆ. ಆದರೆ ಅರ್ಜಿದಾರರು ದಿನಾಂಕ:23.07.2003 ರಂದು ಅರ್ಜಿ ಸಲ್ಲಿಸಿ ಪೋಡಿ ಟಿಪ್ಪಣಿ ಪುಸ್ತಕದ ನಕಲು ಮತ್ತು ಆಕಾರಬಂದು ಕಾಪಿಯ ನಕಲನ್ನು ಕೋರಿದ್ದು ಆದರೆ ಅರ್ಜಿದಾರರಿಗೆ ಆಕಾರಬಂದ್ ನಕಲನ್ನು ಮಾತ್ರ ವಿತರಿಸಿರುವುದು ಕಂಡುಬರುತ್ತದೆ. ಈ ಬಗ್ಗೆ ಆಪಾದಿತ ನೌಕರರು ವಿಚಾರಣಾ ವರದಿಯಲ್ಲಿ ಆರೋಪವನ್ನು ಅಲ್ಲಗಳೆಯುವಂತಹ ದಾಖಲೆಗಳನ್ನು ಹಾಜರುಪಡಿಸುತ್ತೇನೆಂದು ತಿಳಿಸಿ, ನಂತರ ಸದರಿ ದಾಖಲೆಗಳನ್ನು ಹಾಜರುಪಡಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಇದರಿಂದಾಗಿ ಆಪಾದಿತ ನೌಕರರು ಮೊದಲಿಗೆ ಮೂಲ ಟಿಪ್ಪಣಿಯ ಪ್ರತಿಯನ್ನು ವಿತರಿಸಿ ನಂತರ ತಿದ್ದುಪಡಿ ಮಾಡಿ, ದಾಖಲೆಗಳನ್ನು ಗೈರುವಿಲೇ ಮಾಡಿರುವ ಅಂಶ ವಿಚಾರಣಾಧಿಕಾರಿಯ ವರದಿ ಹಾಗೂ ವಿಚಾರಣಾ ದಾಖಲೆಗಳಿಂದ ಕಂಡುಬರುತ್ತದೆ. ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯ ಪ್ರತಿಯೊಂದಿಗೆ ಜಾರಿ ಮಾಡಿದ್ದು, ಸದರಿ ನೋಟೀಸಿಗೆ ಯಾವುದೇ ಬರಹ ಹೇಳಿಕೆಯನ್ನು ಸಲ್ಲಿಸದೇ ಇದ್ದು, ಹೇಳಿಕೆಯನ್ನು ನೀಡಲು ಕಾಲಾವಕಾಶ ನೀಡಿದ್ದರೂ ಸಹ ಬರಹ ಹೇಳಿಕೆಯನ್ನು ಸಲ್ಲಿಸದೆ ಇರುವುದನ್ನು ಗಮನಿಸಿದಾಗ, ಕರ್ತವ್ಯ ಲೋಪ ಎಸಗಿರುವುದು ಕಂಡುಬರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 9(3) ರೊಂದಿಗೆ ಓದಿಕೊಂಡ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್.ಜಿ.ನಾಗರಾಜಯ್ಯ, ಪ್ರಥಮ ದರ್ಜೆ ಭೂಮಾಪಕರು ತಹಸೀಲ್ದಾರ್ ಕಛೇರಿ, ಮಾಲೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.772

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡಾವಳಿ**
**ಸಂಖ್ಯೆ: ಸಿಬ್ಬಂದಿ.ಶಿಸ್ತು.4/02–03, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2009**

**ವಿಷಯ:** ಭದ್ರಾವತಿ ತಾಲ್ಲೂಕು, ತಿಮ್ಲಾಪುರ ಗ್ರಾಮದ ಸ.ನಂ. 78 ರ ಟಿಪ್ಪಣಿ ತಿದ್ದುಪಡಿ ಮಾಡಿರುವ ಬಗ್ಗೆ ನೌಕರರ ವಿರುದ್ಧದ ಶಿಸ್ತುಕ್ರಮ– ಅಂತಿಮ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:**
1) ಭೂ.ಜಂ.ನಿ. ಬೆಂಗಳೂರು ಕಛೇರಿಯ ಕಾರಣ ಕೇಳಿ ನೋಟೀಸ್ ಸಂ: ಸಿಬ್ಬಂದಿ.ಶಿಸ್ತು 11/02–03, ದಿನಾಂಕ:21.04.2005 (ಆರೋಪ ಪಟ್ಟಿಯೊಂದಿಗೆ)
2) ಶ್ರೀ ಹೆಚ್.ಜಿ.ರಮೇಶ್, ದ್ವಿದಭೂ.ರವರ ಬರಹ ಹೇಳಿಕೆ ದಿನಾಂಕ:16.05.2005.
3) ಶ್ರೀ ಎಂ. ಚೇತನಕುಮಾರ್, ದ್ವಿ.ದ.ಭೂ. ರವರ ಬರಹ ಹೇಳಿಕೆ ದಿನಾಂಕ:07.05.2005.
4) ಶ್ರೀ ಕೆ.ಪಿ. ಸಿದ್ದರಾಜು, ದ್ವಿ.ದ.ಭೂ. ರವರ ಮನವಿ.
5) ಶ್ರೀ ನಿಂಗಯ್ಯ, ದ್ವಿ.ದ.ಭೂ. ರವರ ಬರಹ ಹೇಳಿಕೆ ಇಲ್ಲ
6) ಶ್ರೀ ಅಂಥೋಣಿರಾಜ್ ಬಾಂ.ಜ. ಇವರ ಹೇಳಿಕೆ ಇಲ್ಲ.
7) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:14.12.2005 (ವಿಚಾರಣಾಧಿಕಾರಿ ಗಳ ನೇಮಕ)
8) ಭೂ.ಜಂ.ನಿ. ಬೆಂಗಳೂರು ರವರ ಪತ್ರ ಸಂ: ಸಿಬ್ಬಂದಿ.ಶಿಸ್ತು. ವಿ. 11/02–03, ದಿನಾಂಕ:04/16.11.2006 (ವಿಚಾರಣಾ ವರದಿ)
9) ಈ ಕಛೇರಿ ಸಮಸಂಖ್ಯೆ ಎರಡನೇ ಕಾರಣ ಕೇಳಿ ನೋಟೀಸು ದಿನಾಂಕ:09.01.2007 (ವಿಚಾರಣಾ ವರದಿಯೊಂದಿಗೆ)
10) ಶ್ರೀ ಹೆಚ್.ಜಿ.ರಮೇಶ್, ದ್ವಿದಭೂ ರವರ ಬರಹ ಹೇಳಿಕೆ ದಿನಾಂಕ:25.01.2007/ 02.02.2007
11) ಶ್ರೀ ಎಂ.ಚೇತನ ದ್ವಿ.ದ.ಭೂ. ರವರ ಬರಹ ಹೇಳಿಕೆ ದಿನಾಂಕ:22.02.2007
12) ಶ್ರೀ ಕೆ.ಪಿ. ಸಿದ್ದರಾಜು, ದ್ವಿ.ದ.ಭೂ. ಇವರ ಹೇಳಿಕೆ ದಿನಾಂಕ:24.01.2007.
13) ಶ್ರೀ ನಿಂಗಯ್ಯ, ದ್ವಿ.ದ.ಭೂ. ರವರ ಹೇಳಿಕೆ ದಿನಾಂಕ:23/27.01.2007.
14) ಶ್ರೀ ಅಂಥೋಣಿರಾಜ್ ಬಾಂ.ಜ. ಇವರ ಹೇಳಿಕೆ ದಿನಾಂಕ:23.01.2007.
15) ಸರ್ಕಾರದ ಸುತ್ತೋಲೆ ಸಂ: ಸಿಆಸುಇ 18 ಸೇಇವಿ 01, ದಿನಾಂಕ:14.09.2001.

**ಪ್ರಸ್ತಾವನೆ:**

ಶ್ರೀಯುತರಾದ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಚನ್ನರಾಯಪಟ್ಟಣ 2) ಎಂ. ಚೇತನ್, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್, ದೊಡ್ಡಬಳ್ಳಾಪುರ 3) ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್, ಹರಿಹರ 4) ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್, ಹಾಸನ 5) ಅಂಥೋಣಿ ರಾಜ್, ಬಾಂದು ಜವಾನರು, ಉಪ ವಿಭಾಗಾಧಿಕಾರಿಗಳು, ತರೀಕೆರೆ ಇವರುಗಳು ಈ ಹಿಂದೆ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯ ಭದ್ರಾವತಿ ತಾಲ್ಲೂಕು ಭೂಮಾಪನ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ತಿಮ್ಲಾಪುರ ಗ್ರಾಮದ ಸ.ನಂ. 78 ರ ಬಗ್ಗೆ ಮ್ಯುಟೇಷನ್ ಅಳತೆ ಬಂದಾಗ ಅರ್ಜಿದಾರರಿಗೆ ತೊಂದರೆ ನೀಡಿದ್ದು, ಸದರಿ ಸರ್ವೆ ನಂಬರನ್ನು ಅಕ್ರಮವಾಗಿ ತಿದ್ದಿ, ದುರ್ನಡತೆ ಎಸಗಿದ ಮೇರೆಗೆ, ಉಲ್ಲೇಖ (1) ರಲ್ಲಿ ನಮೂದಿಸಿರುವಂತೆ, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ಕಾರಣ ಕೇಳಿ ನೋಟೀಸನ್ನು ಆರೋಪ ಪಟ್ಟಿಯೊಂದಿಗೆ ದಿನಾಂಕ:21.04.2005 ರಂದು ಜಾರಿ ಮಾಡಲಾಗಿರುತ್ತದೆ.

ಮೇಲ್ಕಂಡ ನೌಕರರುಗಳ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ.

1) ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು ಇವರ ಮೇಲೆ ಮಾಡಲಾದ ಆರೋಪ:

ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಹಾಸನ ಆದ ನೀವು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶ್ರೀಮತಿ ರಾಧಮ್ಮ ಕೋಂ ಶ್ರೀ ವೀರಣ್ಣಗೌಡ ಇವರು ತಮ್ಮ ಮೇಲೆ ಆಪಾದಿಸಿ ಅರ್ಜಿ ಕೊಟ್ಟಿದ್ದು, ಅರ್ಜಿಯೊಂದಿಗೆ ಲಗತ್ತಿಸಿದೆ. ಓ.ಎಸ್. ನಂ. 353:98 ರ ಪ್ರಕರಣದಲ್ಲಿ ಅಳತೆ ಮಾಡಿ ನ್ಯಾಯಾಲಯಕ್ಕೆ ಸಲ್ಲಿಸಿದ ವರದಿ ಮತ್ತು ಸ್ಕೆಚ್ ಅನ್ನು ಹಾಜರುಪಡಿಸಿರುವುದನ್ನು ಪರಿಶೀಲಿಸಲಾಗಿ, ಸ.ನಂ. 78 ರ ಟಿಪ್ಪಣಿಯಂತೆ ಅಳತೆ ಮಾಡಿರುವುದಾಗಿ ನಮೂದಿಸಿದ್ದು, ಸ.ನಂ. 78 ರ ಅಕ್ರಮ ತಿದ್ದುಪಡಿಯಾಗುವುದಕ್ಕಿಂತ ಮುಂದೆ ಇದ್ದ ಟಿಪ್ಪಣಿಯಂತೆ ದಕ್ಷಿಣದ ಅಳತೆ ಖರಾರುವಕ್ಕಾಗಿ 676 ಲಿಂಕ್ಸ್‌ಗಳು ಇರಬೇಕಾಗಿದ್ದು, ನೀವು ಅಳತೆ ಮಾಡಿ ದಾಖಲಿಸಿರುವಂತೆ 665 ಲಿಂಕ್ಸ್‌ಗಳಿಗೆ ದಾಖಲಿಸಿ 11 ಲಿಂಕ್ಸ್ ವ್ಯತ್ಯಾಸ ಮಾಡಿ, ಸ.ನಂ.ನ ಮೂಲ ಟಿಪ್ಪಣಿಯಲ್ಲಿನ ಅಳತೆಗಳನ್ನು ಗಣನೆಗೆ ತೆಗೆದುಕೊಳ್ಳದೆ ತಪ್ಪಾಗಿ ಸ್ಕೆಚ್ ತಯಾರಿಸಿ ವರದಿ ಮಾಡಿ, ಭದ್ರಾವತಿ ತಾಲ್ಲೂಕು, ತಿಮ್ಲಾಪುರ ಗ್ರಾಮದ ಸ.ನಂ. 78 ರಲ್ಲಿನ ಭೂಸನಿ.ಎಂಪಿಆರ್.351:2001–2002 ರ ಮ್ಯುಟೇಷನ್ ಕಡತವನ್ನು ಶ್ರೀ ನಿಂಗಯ್ಯ, ಭೂಮಾಪಕರಿಗೆ ಅಳತೆಗಾಗಿ ವಿತರಿಸಿದ್ದು, ಅವರು ದಿನಾಂಕ:23.03.2002 ರಂದು ಅಳತೆಗೆ ಹೋಗಿ ಅಳತೆ ಮಾಡಲಾಗಿ, ಮ್ಯುಟೇಷನ್ ವಿಸ್ತೀರ್ಣದ ಬಗ್ಗೆ ನ್ಯಾಯಾಲಯದ ಓ.ಎಸ್. ನಂ. 353:98 ರ ಕೋರ್ಟ್ ಕಮೀಷನರ್ ಆಗಿ, ತಾವು ಅಳತೆ ಕೆಲಸ ಪೂರೈಸಿ, ದಿನಾಂಕ: 13.06.2001 ರಂದು ನ್ಯಾಯಾಲಯಕ್ಕೆ ಸಲ್ಲಿಸಿರುವ ವರದಿ ಕೂಡ ತಪ್ಪಾಗಿರುತ್ತದೆ ಎಂದು ಹಾಗೂ ನ್ಯಾಯಾಲಯಕ್ಕೆ ತಪ್ಪು ಮಾಹಿತಿ ನೀಡಿರುತ್ತಾರೆ ಎಂದು ಮ್ಯುಟೇಷನ್ ಕಡತವನ್ನು ಪುನ: ತಮಗೆ ಕೊಡಿಸಿ ಅಳತೆ ಮಾಡಿಸಿಕೊಡಬೇಕೆಂದು, ಮ್ಯುಟೇಷನ್‌ದಾರರಿಂದ ಹೇಳಿಕೆ ಪಡೆದಿರುತ್ತಾರೆ. ಹಾಗೂ ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರ ವರದಿಯಲ್ಲಿ ಕಡತದಲ್ಲಿ ಲಗತ್ತಿಟ್ಟಿರುವ ಎಲ್.ಆರ್. ಟಿಪ್ಪಣಿ ಬುಕ್ಕಿನ ನಕಲಿಗೂ ಹಾಗೂ ಹಾಲಿ ಗ್ರಾಮದ ದಾಖಲೆಗಳಲ್ಲಿ ಇರುವ ಎಲ್.ಆರ್. ಟಿಪ್ಪಣಿಗೂ ಅಳತೆಯಲ್ಲಿ ವ್ಯತ್ಯಾಸ ಇರುವುದರಿಂದ, ಮತ್ತು ಮೂಲ ಟಿಪ್ಪಣಿಯಲ್ಲಿನ ಅಳತೆಗಳು ತಿದ್ದಿರುವುದು ಕಂಡು ಬಂದಿರುವುದರಿಂದ ಮುಂದಿನ ಕ್ರಮದ ಬಗ್ಗೆ ನಿವೇದನೆ ವರದಿಯನ್ನು ಸಲ್ಲಿಸಿರುತ್ತಾರೆ. ಸದರೀ ವರದಿಯ ಮೇಲೆ ತಪಾಸಕರು ದಿನಾಂಕ:19.04.2002 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರು ರವರಿಗೆ ಮಂಡಿಸಿದ್ದು, ಭೂದಾಖಲೆಗಳ ಸಹಾಯಕ ನಿರ್ದೇಶಕರು ರವರು ಪ್ರಕರಣವು ದಿನಾಂಕ:16.05.2002 ರಂದು 2.00ಕ್ಕೆ ವಿಚಾರಣೆ ನಿಗದಿಗೊಳಿಸಿರುವುದರಿಂದ ಅಲ್ಲಿಯವರೆಗೆ ಕಛೇರಿಯಲ್ಲಿ ತಾತ್ಕಾಲಿಕ ವಿಲೇ ಇಡಿ ಎಂದು ದಿನಾಂಕ:09.05.2002 ರಲ್ಲಿ ಸೂಚಿಸಿರುತ್ತಾರೆ.

**ಆರೋಪ–2:**

ಸದರಿ ಗ್ರಾಮದ ಮೂಲ ದಾಖಲೆಗಳನ್ನು ದಿನಾಂಕ:18.03.2001 ರಂದು ತಾವು ಸಹಿ ಹಾಕಿ ಪಡೆದಿರುತ್ತೀರಿ. ಪುನ: ದಿನಾಂಕ:30.03.2002 ರಂದು ತಾವು ಒಂದೇ ಬಾರಿಗೆ ಎರಡು ಗ್ರಾಮದ ಮೂಲ ದಾಖಲೆಗಳಿಗೆ ಕಸಬಾ ಹೋಬಳಿ, ಮಾಳೇನಹಳ್ಳಿ ಮತ್ತು ಕಸಬಾ ಹೋಬಳಿ ಕೆಳಗೆ ಬಳೆ ಹೊನ್ನೂರು ಹೋಬಳಿ, ತಿಮ್ಲಾಪುರ ಎಡಿಎಲ್ಆರ್:ಎಂಪಿ:172/97–98 ಮತ್ತು 59 ಚೆಕಿಂಗ್ ಎಂದು ನಮೂದಿಸಿ ಹೋಬಳಿಯಲ್ಲಿನ ಕಾಲಂನಲ್ಲಿಯ ಹೊಳೆ ಹೊನ್ನೂರು ಎಂಬುದನ್ನು ಹೊಡೆದು ಹಾಕಿ ಆಂಗ್ಲ ಭಾಷೆಯಲ್ಲಿ ಡಿ.ಟಿ. ಎಂದು ನಮೂದಿಸಿ ಇದನ್ನು ಹೊಡೆದು ಹಾಕಿ ಪುನ: ಹಳೆ ಹೊನ್ನೂರು ಎಂದು ನಮೂದಿಸಿ ಕಿರು ಸಹಿ ಹಾಕಿರುತ್ತಾರೆ. ಹೀಗೆ ಕಿರು ಸಹಿಯನ್ನು ಗುರುತಿಸಲಾಗಿ ಹೆಚ್.ಜಿ. ಸಹಿ ನಮೂದಿಸಲಾಗಿದೆ.

ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರ ಹೇಳಿಕೆಯಲ್ಲಿ ನೀವು ದಿನಾಂಕ:30.03.2002 ರಲ್ಲಿ ಅಭಿಲೇಖಾಲಯದಿಂದ ಕಸಬಾ ಹೋಬಳಿ, ತಿಮ್ಲಾಪುರ ಗ್ರಾಮದ ಮೂಲ ದಾಖಲೆಗಳನ್ನು ಪಡೆದು ಅದನ್ನು ತಿದ್ದಲು ಶ್ರೀ ಸಿದ್ದರಾಜು ರವರಿಗೆ ಕೊಟ್ಟಿದ್ದುದಾಗಿ ತಿಳಿಸಿರುತ್ತಾರೆ ಮತ್ತು ವಿತರಣೆ ಪುಸ್ತಕದಲ್ಲಿನ ಚಿತ್ತು ಕಾಟುಗಳನ್ನು ಪರಿಶೀಲಿಸಿದಾಗ, ಆಕಸ್ಮಿಕವಾಗಿ ಆಗಿರುವ ತಪ್ಪಾಗದೇ ಒಂದು ದುರುದ್ದೇಶ ಇಟ್ಟುಕೊಂಡೇ ತಿದ್ದಿರುವುದು ಕಂಡು ಬಂದಿರುತ್ತದೆ. ಮತ್ತು ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರ ಹೇಳಿಕೆಯಂತೆ ಹಾಗೂ ಸಾರ್ವಜನಿಕರ ಸಾಕ್ಷಿಯಂತೆ ಮೂಲ ದಾಖಲೆಯ ಕೊಠಡಿಯಿಂದ ನೀವು ಸದರೀ ಗ್ರಾಮದ ದಾಖಲೆಗಳನ್ನು ದಿನಾಂಕ:30.03.2002 ರಂದು ಪಡೆದಿರುವುದು ಸ್ಪಷ್ಟವಾಗಿರುತ್ತದೆ.

**ಆರೋಪ–3:**

ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರನ್ನು ಭದ್ರಾವತಿಯಿಂದ ಚನ್ನಗಿರಿಗೆ ಸ್ಥಳಾಂತರಿಸಿದ್ದು, ದಿನಾಂಕ:24.03.2002 ರ ನಂತರ ಚನ್ನಗಿರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇವರನ್ನು ಕರೆಯಿಸಿಕೊಂಡು, ದಿನಾಂಕ: 30.03.2002 ರಂದು ನೀವು ಸದರಿ ಸರ್ವೆ ನಂಬರ್‌ಗೆ ಸಂಬಂಧಿಸಿದಂತೆ, ಅಭಿಲೇಖಾಲಯದಿಂದ ಮೂಲ ದಾಖಲೆಗಳನ್ನು ಪಡೆದು ಈಗಾಗಲೇ ಚನ್ನಗಿರಿ ತಾಲ್ಲೂಕಿಗೆ ನೇಮಕಗೊಂಡಿದ್ದ, ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರಿಗೆ ಗ್ರಾಮದ ಕಡತಗಳನ್ನು ಅನಧಿಕೃತವಾಗಿ ಸರಬರಾಜು ಮಾಡಿ ಮೂಲ ದಾಖಲೆಗಳನ್ನು ತಿದ್ದಲು ಕಾರಣ ಕರ್ತರಾಗಿರುತ್ತೀರಾ ಹಾಗೂ ಅರ್ಜಿದಾರರಾದ ಶ್ರೀಮತಿ ರಾಧಮ್ಮ ಇವರು ಅವರ ದಿನಾಂಕ:30.04.2002 ರ ಅರ್ಜಿಯಲ್ಲಿ ತಾವು ಈ ಪ್ರಕರಣವನ್ನು ಸಕ್ರಮಗೊಳಿಸಲು ತಲಾ 1500–00 ರಂತೆ 6 ಜನಕ್ಕೆ ಲಂಚವನ್ನು ಕೋರಿದ್ದು, ತಮ್ಮ ಬೇಡಿಕೆಯನ್ನು ಈಡೇರಿಸದಿದ್ದರೆ, ಈ ಪ್ರಕರಣ ಇನ್ನೂ 20 ವರ್ಷಗಳಾದರೂ ಸಕ್ರಮಗೊಳಿಸದಂತೆ, ಹಾಳು ಮಾಡಲಾಗುವುದೆಂದು ಬೆದರಿಕೆ

ಹಾಕಿದ್ದು, ತಮ್ಮ ಮಾತಿನ ಪ್ರಕಾರ ಅಕ್ರಮ' ತಿದ್ದುಪಡಿ ಮಾಡಲು ಸಹಕರಿಸಿರುವುದನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಇದರಿಂದ ಕರ್ನಾಟಕ ಸರ್ಕಾರಿ ಕಛೇರಿ ಕೈಪಿಡಿಯ ಕಂಡಿಕೆ 8(ಎ) ಹಾಗೂ ಮಾನ್ಯ ನಿರ್ದೇಶಕರ ಸುತ್ತೋಲೆಯ ನಿರ್ದೇಶನ ಮತ್ತು ಕೆ.ಸಿ.ಎಸ್ (ನಡತೆ) 1966 ರ ನಿಯಮ 3 (i) (ii) (iii) ಅನ್ನು ಉಲ್ಲಂಘಿಸಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

2) ಶ್ರೀ ಎಂ.ಚೇತನ್, ದ್ವಿತೀಯ ದರ್ಜೆ ಭೂಮಾಪಕರು ಇವರ ಮೇಲೆ ಮಾಡಲಾದ ಆರೋಪ:

ಶ್ರೀ ಎಂ.ಚೇತನ್, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ಆದ ನೀವು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ನೀವು ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು, ತಿಮ್ಲಾಪುರ ಗ್ರಾಮದ ಸ.ನಂ. 78 ರ ದುರಸ್ತಿಯ ಕಾರ್ಯವನ್ನು ತಾವು ಮಾಡಿದ್ದು, ನಂತರ ಸದರಿ ಸರ್ವೆ ನಂಬರ್ ಮ್ಯುಟೇಷನ್ ಕಡತ ಅಳತೆಗೆ ಬಂದಾಗ ಅರ್ಜಿದಾರರಿಗೆ ಸಾಕಷ್ಟು ತೊಂದರೆ ಕೊಟ್ಟಿರುತ್ತೀರಿ ಹಾಗೂ ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು ಇವರೊಂದಿಗೆ ಸೇರಿಕೊಂಡು ಅರ್ಜಿದಾರರಾದ ಶ್ರೀಮತಿ ರಾಧಮ್ಮ, ಕೋಂ ಶ್ರೀ ವೀರಣ್ಣಗೌಡ ಇವರಿಂದ ಅಕ್ರಮವಾಗಿ ಹಣ ವಸೂಲಿ ಮಾಡುವ ಕಾರ್ಯದಲ್ಲಿ ನೀವು ನೇರವಾಗಿ ಭಾಗಿಯಾಗಿರುವುದಾಗಿ ದೂರು ಅರ್ಜಿದಾರರು ಅವರ ಮನವಿಯಲ್ಲಿ ಆರೋಪ ಮಾಡಿದ್ದು, ಸದರಿ ಸರ್ವೆ ನಂಬರ್ ಮೂಲ ದಾಖಲೆಗಳನ್ನು ಅಕ್ರಮವಾಗಿ ತಿದ್ದಿರುವ ಪ್ರಕರಣದಲ್ಲಿ ನೀವು ಶಾಮೀಲಾಗಿರುತ್ತೀರಿ. ಇದರಿಂದ ಕರ್ನಾಟಕ ಸರ್ಕಾರಿ ಕಛೇರಿ ಕೈಪಿಡಿಯ ಕಂಡಿಕೆ 8(ಎ) ಹಾಗೂ ಮಾನ್ಯ ನಿರ್ದೇಶಕರ ಸುತ್ತೋಲೆಯ ನಿರ್ದೇಶನ ಮತ್ತು ಕೆ.ಸಿ.ಎಸ್ (ನಡತೆ) ನಿಯಮಾವಳಿ 1966 ರ ನಿಯಮ 3(i)(ii)(iii) ಅನ್ನು ಉಲ್ಲಂಘಿಸಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

3) ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರ ಮೇಲೆ ಮಾಡಲಾದ ಆರೋಪ:

ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ದಾವಣಗೆರೆ ಆದ ನೀವು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು, ತಿಮ್ಲಾಪುರ ಗ್ರಾಮದ ಸ.ನಂ.29 ರ ಪೈಕಿ ದರಖಾಸ್ತು ಮೂಲಕ ಮಂಜೂರಾದ ಪ್ರದೇಶವನ್ನು ಶ್ರೀ ಸಕ್ಕರೆನಾಯಕ್ ರವರಿಗೆ ಮಂಜೂರು ಮಾಡಿದ ದರಖಾಸ್ತು ಅಳತೆ ಮಾಡುವಾಗ ನಿಮಗಿಂತ ಸೇವೆಯಲ್ಲಿ ಹಿರಿಯರಾದ ಶ್ರೀ ನಿಂಗಯ್ಯ ಮತ್ತು ಶ್ರೀ ಹೆಚ್. ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರುಗಳನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿ ಅವರುಗಳ ಸಲಹೆಯಂತೆ ಅಳತೆ ಮಾಡಿ ತಯಾರಿಸಿದ ಟಿಪ್ಪಣಿ ಮತ್ತು ಇತರೆ ದಾಖಲೆಗಳನ್ನು ಶ್ರೀ ಎಂ.ಚೇತನ, ದ್ವಿತೀಯ ದರ್ಜೆ ಭೂಮಾಪಕರು ಪರಿಶೀಲಿಸಿ ದುರಸ್ತಿ ಕೆಲಸ ನಿರ್ವಹಿಸಿದ್ದು, ಅಂತಿಮವಾಗಿ ದಿನಾಂಕ:13.03.2001 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರವರಿಂದ ಸಹಿಯಾಗಿ ಹೊಸ ಸ.ನಂ.78 ಎಂದು ದಾಖಲಿಸಿ ದುರಸ್ತಾಗಿರುತ್ತದೆ. ತದ ನಂತರ ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು ಕೋರ್ಟ್ ಕಮೀಷನರ್ ಅಳತೆ ಮಾಡಿದಾಗ, ಮೂಲ ಟಿಪ್ಪಣಿಗಳಲ್ಲಿ ಅಳತೆ ವ್ಯತ್ಯಾಸವಾಗಿರುತ್ತದೆ ಎಂದು ಬಗ್ಗೆ ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಮತ್ತು ಶ್ರೀ ಅಂಥೋಣಿರಾಜ್ ಬಾಂದು ಜವಾನರ ಬೆದರಿಕೆ ಒತ್ತಡ ಮತ್ತು ಪುಸಲಾಯಿಸುವಿಕೆಯಿಂದ ಹಾಗೂ ಕೆಲಸ ಕಳೆದುಕೊಳ್ಳುವ ಹೆದರಿಕೆಯಿಂದ ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಇವರು ಹೇಳಿದಂತೆ ಸದರೀ ಸರ್ವೆ ನಂಬರ್ ಮೂಲ ಅಳತೆಗಳನ್ನು ತಿದ್ದಬೇಕೆಂದು ಹಾಗೂ ತಿದ್ದುವುದರಿಂದ ಯಾವುದೇ ತೊಂದರೆಯಾಗುವುದಿಲ್ಲವೆಂದು ತಿಳಿಸಿದ ಮೇರೆಗೆ, ಸ.ನಂ. 78 ರ ಮೂಲ ಟಿಪ್ಪಣಿ ಮತ್ತು ಮಾಪುಗಳನ್ನು ಬದಲಾಯಿಸಿರುವುದಾಗಿ ನೀವು ನಿಮ್ಮ ಹೇಳಿಕೆಯಲ್ಲಿ ಒಪ್ಪಿಕೊಂಡಿರುತ್ತೀರಿ. ಇದರಿಂದ ಕರ್ನಾಟಕ ಸರ್ಕಾರಿ ಕಛೇರಿ ಕೈಪಿಡಿಯ ಕಂಡಿಕೆ 8(ಎ) ಹಾಗೂ ಮಾನ್ಯ ನಿರ್ದೇಶಕರ ಸುತ್ತೋಲೆಯ ನಿರ್ದೇಶನ ಮತ್ತು ಕೆ.ಸಿ.ಎಸ್ (ನಡತೆ) ನಿಯಮಾವಳಿ 1966 ರ ನಿಯಮ 3 (i)(ii)(iii) ಅನ್ನು ಉಲ್ಲಂಘಿಸಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

4) ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಇವರ ಮೇಲೆ ಮಾಡಲಾದ ಆರೋಪ:

ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು ಕಛೇರಿ, ಶಿವಮೊಗ್ಗ ಆದ ನೀವು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿ ಕಾರ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ, ತಿಮ್ಲಾಪುರ ಗ್ರಾಮದ ಸ.ನಂ. 78 ರ ಮ್ಯುಟೇಷನ್ ಪೋಡಿ ಮಾಡಲು ತಹಶೀಲ್ದಾರ್, ಭದ್ರಾವತಿ ತಾಲ್ಲೂಕು ರವರಿಂದ ಬಂದ ಮ್ಯುಟೇಷನ್ ಕಡತವನ್ನು ದಿನಾಂಕ:14.03.2002 ರಂದು ತಾಲ್ಲೂಕು ಭೂಮಾಪನ ಕಛೇರಿಯಿಂದ ಸ್ವೀಕರಿಸಿ,

ಭೂಸನಿ.ಎಂಪಿಆರ್.351/2001–2002 ಎಂಬುದಾಗಿ ದಾಖಲಾಗಿ ಸದರಿ ಮ್ಯುಟೇಷನ್ ಕಡತವನ್ನು ನಿಮಗೆ ಅಳತೆ ಕೆಲಸಕ್ಕಾಗಿ ವಿತರಿಸಿರುತ್ತಾರೆ. ನೀವು ದಿನಾಂಕ:22.03.2002 ಕ್ಕೆ ಅಳತೆಗೆ ನಿಗಧಿಗೊಳಿಸಿ ಸಂಬಂಧಪಟ್ಟವರಿಗೆ ನೋಟೀಸ್ ಜಾರಿ ಮಾಡಿ, ದಿನಾಂಕ:20.03.2002 ರಂದು ಅಭಿಲೇಖಾಲಯದಿಂದ ಮೂಲ ದಾಖಲೆಗಳನ್ನು ಪಡೆದಿರುತ್ತೀರಾ. ಅಳತೆ ನಿಗಧಿಗೊಳಿಸಿದ ದಿನಾಂಕ:20.03.2002ರ ಬದಲಾಗಿ ದಿನಾಂಕ:23.03.2002 ರಂದು ಸ್ಥಳಕ್ಕೆ ಹೋಗಿ ಅಳತೆ ಪರಿಶೀಲಿಸಿ, ಈಗಾಗಲೇ ಶ್ರೀ ಹೆಚ್. ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು, ಓ.ಎಸ್. ನಂ. 53:98 ರ ಪ್ರಕರಣದಲ್ಲಿ ಅಳತೆ ಮಾಡಿ ನ್ಯಾಯಾಲಯಕ್ಕೆ ವರದಿ ನೀಡಿರುವುದರಿಂದ, ಸದರೀ ಮ್ಯುಟೇಷನ್ ಕಡತವನ್ನು ಶ್ರೀ ಹೆಚ್. ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರವರಿಗೆ ಕೊಡಿಸಿ ಅಳತೆ ಮಾಡಿಕೊಡಬೇಕೆಂದು ಮ್ಯುಟೇಷನ್ ಮಂಜೂರಿದಾರರು ಹೇಳಿಕೆ ಕೊಟ್ಟು ಅವರು ವಹಿಸಿದ ಕರ್ತವ್ಯದಿಂದ ತಪ್ಪಿಸಿಕೊಂಡು ಅನಧಿಕೃತ ತಿದ್ದುಪಡಿಯಲ್ಲಿ ಪರೋಕ್ಷವಾಗಿ ಭಾಗಿಯಾಗಿರುತ್ತಾರೆ.

**ಆರೋಪ–2:**

ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು ಕಛೇರಿ, ಶಿವಮೊಗ್ಗ ಆದ ನೀವು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿ ಕಾರ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ, ತಿಮ್ಲಾಪುರ ಗ್ರಾಮದ ಸ.ನಂ. 78 ರ ಮ್ಯುಟೇಷನ್ ಪೋಡಿ ಅಳತೆಗೆ ದಿನಾಂಕ:20.03.2002 ರಂದು ನಿಗಧಿಪಡಿಸಿ ಪ್ರವಾಸ ಕಾರ್ಯಕ್ರಮದಂತೆ ಅಳತೆ ಕೆಲಸಕ್ಕೆ ಹಾಜರಾಗದೆ ಪ್ರವಾಸ ಕಾರ್ಯಕ್ರಮದಂತೆ ಬದಲಾವಣೆ ಮಾಡಿದಾಗ ಭೂದಾಖಲೆಗಳ ಸಹಾಯಕ ನಿರ್ದೇಶಕರು ಅವರ ಪೂರ್ವಾನುಮತಿ ಪಡೆಯದೇ ಪ್ರವಾಸ ವೇಳಾ ಪಟ್ಟಿಯನ್ನು ಬದಲಾವಣೆ ಮಾಡಿಕೊಂಡಿರುವುದು ಮಾನ್ಯ ನಿರ್ದೇಶಕರ ಸುತ್ತೋಲೆ ಉಲ್ಲಂಘನೆಯಾಗಿರುತ್ತದೆ. ಅಲ್ಲದೇ ನೀವು ಮಾರ್ಚ್–2002 ರ ದಿನಚರಿಯಲ್ಲಿ 22.03.2002 ರಂದು ತಿಮ್ಲಾಪುರಕ್ಕೆ ಅಳತೆಗೆ ಹೋದ ದಾಖಲೆ ಇದ್ದು, ಇದಕ್ಕೆ ವಿರುದ್ದವಾಗಿ ದಿನಾಂಕ:23.03.2002 ರಂದು ದಿನಾಂಕ ನಮೂದಿಸಿ ನನ್ನ ಸಮಕ್ಷಮ ಅಳತೆ ಮಾಡಿರುವುದಾಗಿ ಸಹಿ ಮಾಡಿರುತ್ತೀರಿ. ನೀವು ಅಳತೆಗೆ ಹೋಗುವ ಪೂರ್ವಭಾವಿಯಾಗಿ ಸ.ನಂ. 78 ರ ಮೂಲ ದಾಖಲೆಗಳನ್ನು ಪರಿಶೀಲಿಸಿದ್ದು, ದಾಖಲೆಗಳು ತಿದ್ದಿರುವ ಅಂಶಗಳ ಬಗ್ಗೆ ಯಾವುದೇ ವರದಿ ಮಾಡಿರುವುದಿಲ್ಲ. ಬದಲಾಗಿ ಸ್ಥಳಕ್ಕೆ ಹೋಗಿ ಅಳತೆ ಮಾಡಿದ ನಂತರ ದಿನಾಂಕ:19.04.2002 ರಂದು ತಪಾಸಕರಿಗೆ ಸಲ್ಲಿಸಿದ ನಿವೇದನಾ ವರದಿಯಲ್ಲಿ ಅರ್ಜಿದಾರರು ಲಗತ್ತಿಸಿರುವ ಟಿಪ್ಪಣಿಗೂ ಮತ್ತು ಮೂಲ ದಾಖಲೆಗಳಲ್ಲಿನ ಟಿಪ್ಪಣಿಗೂ ವ್ಯತ್ಯಾಸವಿರುತ್ತದೆಯೆಂದು ಮೂಲ ಟಿಪ್ಪಣಿಗಳಲ್ಲಿ ದಾಖಲೆಗಳು ತಿದ್ದಿರುವುದಾಗಿ ಕಂಡು ಬರುತ್ತದೆ ಎಂದು ವರದಿ ಮಾಡಿರುತ್ತೀರಾ. ಶ್ರೀ ಸಿದ್ದರಾಜು ರವರ ಹೇಳಿಕೆ ಮೇರೆಗೆ ನೀವು ಹೇಳಿದ ಅಳತೆಗಳಂತೆ ದಿನಾಂಕ: 30.03.2002 ರಂದು ದಾಖಲೆಗಳನ್ನು ತಿದ್ದಲಾಗಿದೆ ಎಂದು ಹೇಳಿರುತ್ತಾರೆ. ಇದರಿಂದ ಮೂಲ ದಾಖಲೆಗಳನ್ನು ತಿದ್ದುವಲ್ಲಿ ನೀವು ಪರೋಕ್ಷವಾಗಿ ಭಾಗಿಯಾಗಿರುತ್ತೀರಿ ಹಾಗೂ ಕಾರಣಕರ್ತರಾಗಿರುತ್ತೀರಾ. ಇದರಿಂದ ಕರ್ನಾಟಕ ಸರ್ಕಾರಿ ಕಛೇರಿ ಕೈಪಿಡಿಯ ಕಂಡಿಕೆ 8(ಎ) ಹಾಗೂ ಮಾನ್ಯ ನಿರ್ದೇಶಕರ ಸುತ್ತೋಲೆ ನಿರ್ದೇಶನ ಮತ್ತು ಕೆ.ಸಿ.ಎಸ್. (ನಡತೆ) ನಿಯಮ 1966 ನಿಯಮ 3 (i)(ii)(iii) ಅನ್ನು ಉಲ್ಲಂಘಿಸಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

5) ಶ್ರೀ ಅಂಥೋಣಿರಾಜ್, ಬಾಂದು ಜವಾನರು ಇವರ ಮೇಲೆ ಮಾಡಲಾದ ಆರೋಪ:

ಶ್ರೀ ಅಂಥೋಣಿರಾಜ್, ಬಾಂದು ಜವಾನರು, ಭೂದಾಖಲೆಗಳ ಸಹಾಯಕ ನಿರ್ದೇಶಕರವರ ಕಛೇರಿ, ಶಿವಮೊಗ್ಗ ಆದ ನೀವು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಭದ್ರಾವತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು, ತಿಮ್ಲಾಪುರ ಗ್ರಾಮದ ಸ.ನಂ. 78 ರ ಮೂಲ ಟಿಪ್ಪಣಿಯಲ್ಲಿ ಅಕ್ರಮವಾಗಿ ತಿದ್ದುಪಡಿಯಾದ ನಂತರ ನಕಲು ಕೋರಿ ಶ್ರೀ ವೀರಣ್ಣಗೌಡರು ದಿನಾಂಕ:30.03.2002 ರಂದು ಅರ್ಜಿ ಸಲ್ಲಿಸಿದ್ದು, ಸದರೀ ಅರ್ಜಿಯಲ್ಲಿ ನಕಲನ್ನು ಶ್ರೀ ಅಂಥೋಣಿರಾಜ್, ಬಾಂದು ಜವಾನರು ಇವರ ಹಸ್ತ ನೀಡತಕ್ಕದ್ದೆಂದು ಅರ್ಜಿಯಲ್ಲಿ ನಮೂದಿಸಿದ್ದು, ಅದರಂತೆ ನಕಲು ತಯಾರಿಸಿದ ನಂತರ ನಕಲು ಪಡೆದಿರುತ್ತೇನೆ ಎಂಬುದಾಗಿ ಅರ್ಜಿಯ ಮೇಲೆ ಸಹಿ ಮಾಡಿ ಪಡೆದಿರುತ್ತೀರಾ. ನೀವು ಒಬ್ಬ ಸರ್ಕಾರಿ ನೌಕರರಾಗಿ ಸಾರ್ವಜನಿಕರ ಹೆಸರಿನಲ್ಲಿ ನಕಲು ಪಡೆಯುವ ವಿಷಯದಲ್ಲಿ ದಲ್ಲಾಳಿಯಾಗಿ ಕಾರ್ಯ ನಿರ್ವಹಿಸಿರುತ್ತೀರಿ, ಹಾಗೂ ಅಕ್ರಮ ತಿದ್ದುಪಡಿ ಮಾಡಲು ಕಾರಣರಾಗಿರುತ್ತೀರಾ. ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಇವರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯಿಂದ ವರ್ಗಾವಣೆ ಮಾಡಬಾರದೆಂದು ಮಾನ್ಯ ಮುಖ್ಯಮಂತ್ರಿಯವರ ಕಛೇರಿಯ ಶ್ರೀ ಅರಸು ಎಂಬುವರ ಒತ್ತಡಪೂರ್ವಕವಾಗಿ ದೂರವಾಣಿ ಕರೆಗಳನ್ನು ಸಹ ಮಾಡಿಸಿರುತ್ತೀರಾ. ನೀವು ಭೂಮಾಪಕರಿಗೆ ಬೆದರಿಕೆ ಹಾಕುವುದು ನಿಮ್ಮ ಕಾರ್ಯ ವ್ಯಾಪ್ತಿ ಮೀರಿ ಕಛೇರಿ ಆಡಳಿತದಲ್ಲಿ ತಲೆ ಹಾಕಿ ಅನಾವಶ್ಯಕ ವಿವಾದಗಳನ್ನು ಸೃಷ್ಟಿಸಿರುತ್ತೀರಿ. ಸರ್ಕಾರಿ ನೌಕರರಾಗಿ ಗೂಂಡಾಗಿರಿಯನ್ನು ಮಾಡಿ ಭೂಮಾಪಕರುಗಳನ್ನು ಹೆದರಿಸಿರುತ್ತೀರಿ. ಸದರೀ ಸರ್ವೆ ನಂಬರ್ ಮೂಲ ಟಿಪ್ಪಣಿಯನ್ನು ತಿದ್ದಲು ಭೂಮಾಪಕರೊಂದಿಗೆ ಶಾಮೀಲಾಗಿರುತ್ತೀರಾ. ಇದರಿಂದ ನೀವು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966 ನಿಯಮ 3 (i)(ii)(iii) ಅನ್ನು ಉಲ್ಲಂಘಿಸಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ

ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ದೋಷಾರೋಪಣೆ.

ಸದರಿ ನೌಕರರುಗಳು ಈ ಕೆಳಕಂಡ ದಿನಾಂಕಗಳಂದು ನೋಟೀಸನ್ನು (ಆರೋಪ ಪಟ್ಟಿಯೊಂದಿಗೆ) ಸ್ವೀಕರಿಸಿರುತ್ತಾರೆ ಹಾಗೂ ಬರಹ ಹೇಳಿಕೆಯನ್ನು ನೀಡಿರುತ್ತಾರೆ.

| | | | |
|---|---|---|---|
| 1. | ಶ್ರೀ ಹೆಚ್. ಜಿ. ರಮೇಶ್, ಎರಡನೇ ದರ್ಜೆ ಭೂಮಾಪಕರು. | ದಿನಾಂಕ ಇಲ್ಲ | 16.05.2005 |
| 2. | ಶ್ರೀ ಎಂ. ಚೇತನ್, ಎರಡನೇ ದರ್ಜೆ ಭೂಮಾಪಕರು | 25.04.2005 | 07.05.2005 |
| 3. | ಶ್ರೀ ಕೆ.ಪಿ. ಸಿದ್ದರಾಜು, ಎರಡನೇ ದರ್ಜೆ ಭೂಮಾಪಕರು | 06.05.2005 | 24.01.2007 |
| 4. | ಶ್ರೀ ನಿಂಗಯ್ಯ, ಎರಡನೇ ದರ್ಜೆ ಭೂಮಾಪಕರು | 27.04.2005 | ಇಲ್ಲ |
| 5. | ಶ್ರೀ ಅಂಥೋಣಿರಾಜ್, ಬಾಂದು ಜವಾನರು | 27.04.2005 | ಇಲ್ಲ |

ಮೇಲ್ಕಂಡ ನೌಕರರುಗಳಾದ ಕ್ರ.ಸಂ. 1,2,3 ರವರು ದೋಷಾರೋಪಣೆಯನ್ನು ಸ್ವೀಕರಿಸಿದ ನಂತರ ಅನುಬಂಧ–3 ರಲ್ಲಿನ ದಾಖಲಾತಿಗಳ ಪ್ರತಿಗಳನ್ನು ಒದಗಿಸಲು ಕೋರಿದ್ದರ ಮೇರೆಗೆ, ಸದರಿ ಪ್ರತಿಗಳನ್ನು ಒದಗಿಸಲಾಗಿರುತ್ತದೆ. ನಂತರ ಅವರು ಉಲ್ಲೇಖದಲ್ಲಿನ 2 ರಿಂದ 4 ರವರೆಗಿನ ದಿನಾಂಕಗಳಂದು ಸಲ್ಲಿಸಿರುವ ಬರಹ ಹೇಳಿಕೆಯಲ್ಲಿ ಅವರುಗಳ ಮೇಲೆ ಮಾಡಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ ಹಾಗೂ ಕ್ರ.ಸಂ. 4 ಮತ್ತು 5ರ ನೌಕರರುಗಳು ಯಾವುದೇ ಬರಹ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ದೋಷಾರೋಪಣೆಯಲ್ಲಿನ ಸತ್ಯಾಸತ್ಯತೆಯನ್ನು ಕಂಡು ಕೊಳ್ಳಲು ಉಲ್ಲೇಖ (7)ರ ಈ ಕಛೇರಿ ಆದೇಶ ದಿನಾಂಕ:14.12.2005 ರಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು(ವಿಚಾರಣೆ ಮತ್ತು ತನಿಖೆ) ಕೇಂದ್ರಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ, ಶ್ರೀ ವಿ. ನರಸಪ್ಪ, ಪ್ರಭಾರ ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 11 ರ ಪ್ರಕಾರ ನಿಯಮಾನುಸಾರ ವಿಚಾರಣೆ ನಡೆಸಿ, ದಿನಾಂಕ:04/16.11.2006 ರಂದು ತಮ್ಮ ಅಭಿಪ್ರಾಯದೊಂದಿಗೆ ವಿಚಾರಣಾ ವರದಿ ಮತ್ತು ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯನ್ನು ವಿಚಾರಣಾ ದಾಖಲಾತಿಗಳೊಂದಿಗೆ ಪರಿಶೀಲಿಸಲಾಗಿ, ಸದರಿ ನೌಕರರುಗಳ ಮೇಲೆ ಮಾಡಲಾದ ಆರೋಪಗಳು, ಶ್ರೀ ಹೆಚ್.ಜಿ. ರಮೇಶ್, ಇವರ ವಿರುದ್ದದ ಆರೋಪ ಸಾಬೀತಾಗಿರುತ್ತದೆ. ಶ್ರೀ ಎಂ. ಚೇತನ, ಇವರ ವಿರುದ್ದದ ಆರೋಪ ಭಾಗಶ: ಸಾಬೀತಾಗಿರುತ್ತದೆ. ಶ್ರೀ ಕೆ. ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ಇವರ ವಿರುದ್ದದ ಆರೋಪ ಸಾಬೀತಾಗಿರುತ್ತದೆ. ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಇವರ ವಿರುದ್ದದ ಆರೋಪ ಸಾಬೀತಾಗಿರುತ್ತದೆ. ಶ್ರೀ ಅಂಥೋಣಿರಾಜ್, ಬಾಂದು ಜವಾನರು ಇವರ ವಿರುದ್ದದ ಆರೋಪ ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ನೀಡಿರುವ ಅಭಿಪ್ರಾಯ ನೀಡಿರುವ ಹಿನ್ನೆಲೆಯಲ್ಲಿ ದಿನಾಂಕ:09.01.2007 ರಂದು ಎರಡನೇ ಕಾರಣ ಕೇಳಿ ನೋಟೀಸ್‌ಗಳನ್ನು ಜಾರಿಗಾಗಿ ಕಳುಹಿಸಿರುವುದನ್ನು ನೌಕರರುಗಳು ನೋಟೀಸನ್ನು ಕ್ರಮವಾಗಿ, ಈ ಕೆಳಕಂಡಂತೆ ಸ್ವೀಕರಿಸಿ, ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

| | | ಸ್ವೀಕರಿಸಿರುವ ದಿನಾಂಕ | ರಕ್ಷಣಾ ಹೇಳಿಕೆ ದಿನಾಂಕ |
|---|---|---|---|
| 1. | ಶ್ರೀ ಹೆಚ್.ಜಿ.ರಮೇಶ್, ದ್ವಿದಭೂ | 19.01.2007 | 25.01.2007<br>02.02.2007 |
| 2. | ಶ್ರೀ ಎಂ. ಚೇತನ, ದ್ವಿದಭೂ | 31.01.2007 | 22.02.2007 |
| 3. | ಶ್ರೀ ಕೆ.ಪಿ. ಸಿದ್ದರಾಜು, ದ್ವಿದಭೂ | 16.01.2007 | 24.01.2007 |
| 4. | ಶ್ರೀ ನಿಂಗಯ್ಯ, ದ್ವಿದಭೂ | 18.01.2007 | 23/27.01.2007 |
| 5. | ಅಂಥೋಣಿರಾಜ್, ಬಾಂ.ಜ. | 16.01.2007 | 23.01.2007 |

ರಕ್ಷಣಾ ಹೇಳಿಕೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕಗಳಂದು ನೀಡಿರುತ್ತಾರೆ. ಆರೋಪಿತ ನೌಕರರುಗಳು ಎರಡನೇ ಕಾರಣ ಕೇಳಿ ನೋಟೀಸ್ ನೀಡಿರುವ ಬರಹ ಹೇಳಿಕೆಗಳ ಅಂಶಗಳನ್ನು ಪರಿಶೀಲಿಸಲಾಗಿ,

ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು ಇವರು ನೀಡಿರುವ ಹೇಳಿಕೆಯಲ್ಲಿ ಸದರಿ ನಂಬರಿಗೆ ಸಂಬಂಧಪಟ್ಟ ಕೋರ್ಟ್ ಕಮೀಷನರ್ ಕಡತ ಅಳತೆಯನ್ನು ಅಕ್ರಮ ತಿದ್ದುಪಡಿ ಆಗುವುದಕ್ಕಿಂತ ಮುಂಚೆ ಇದ್ದ ಅಂದರೆ 2001 ರಲ್ಲಿ ದುರಸ್ತಾದ ಟಿಪ್ಪಣಿಯನ್ನು ಆಧಾರವಾಗಿಟ್ಟುಕೊಂಡು ಸ್ಥಳಕ್ಕೆ ಹೋಗಿ ಹಿಂದೆ ದುರಸ್ತಾದ ಮೂಲ ಟಿಪ್ಪಣಿಯ ಅನ್ವಯ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ. ಸದರಿ ಟಿಪ್ಪಣಿಯನ್ನು ತಿದ್ದಲು ಪರೋಕ್ಷವಾಗಿ ಪ್ರಚೋದನೆಯನ್ನು ನೀಡಿರುವುದಿಲ್ಲವೆಂದು ತಿಳಿಸಿ ಆರೋಪ ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ಶ್ರೀ ಎಂ. ಚೇತನ, ದ್ವಿತೀಯ ದರ್ಜೆ ಭೂಮಾಪಕರು, ಇವರು ಅಕ್ರಮ ತಿದ್ದುಪಡಿ ಜರುಗುವ ಕಾಲದಲ್ಲಿ ಸದರಿ ಕಛೇರಿಯಲ್ಲಿ ಇರುವುದಿಲ್ಲವೆಂದು, ನಿಯೋಜನೆ ಮೇರೆಗೆ ದಾವಣಗೆರೆ ಕಛೇರಿಗೆ ಹಾಜರಾಗಲು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯಿಂದ ದಿನಾಂಕ:23.03.2002 ರಂದು ಅಪರಾಹ್ನ ಬಿಡುಗಡೆ ಹೊಂದಿರುತ್ತೇನೆಂದು ಈ ಪ್ರಕರಣದಲ್ಲಿ ನನ್ನ ಪಾತ್ರವೇನು ಇಲ್ಲವೆಂದು ತಿಳಿಸುತ್ತಾ, ಆರೋಪ ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ಶ್ರೀ ಕೆ.ಪಿ. ಸಿದ್ದರಾಜು, ಎರಡನೆ ದರ್ಜೆ ಭೂಮಾಪಕರು ಇವರು ಟಿಪ್ಪಣಿ ತಿದ್ದಿಕೊಡಲು ಪರೋಕ್ಷ ಹಾಗೂ ನೇರವಾಗಿ ಪ್ರಕರಣದಲ್ಲಿ ಭಾಗಿಯಾಗಿರುವ ಭೂಮಾಪಕರುಗಳು ಪ್ರಚೋದಿಸಿ ನನ್ನನ್ನು ಬಲಿ ಪಶುವನ್ನಾಗಿ ಮಾಡಿರುತ್ತಾರೆ. ಸದರಿಯವರು ಹೇಳಿಕೊಟ್ಟಂತೆ ಎಲ್.ಆರ್. ಪಕ್ಕಾ ಬುಕ್ಕಿನಲ್ಲಿ ದಾಖಲಿಸಿದ ಬೇಸ್ ಮಾಫಿಗೆ ದಾಖಲಿಸಿದ ಬೇಸ್ ಮಾಫಿಗೆ ಅನುಗುಣವಾಗಿ, ಮೂಲ ಟಿಪ್ಪಣಿಯಲ್ಲಿನ ಬೇಸ್‌ಮ್ಯಾಪನ್ನು ತಿದ್ದಿಕೊಟ್ಟಿರುತ್ತೇನೆ. ಇದರಿಂದ ವಿಸ್ತೀರ್ಣಕ್ಕೆ ಯಾವುದೇ ರೀತಿ ವ್ಯತ್ಯಾಸವಾಗುವುದಿಲ್ಲ, ಯಾರಿಗೂ ಅನ್ಯಾಯವಾಗುವುದಿಲ್ಲವಾದ್ದರಿಂದ, ಆರೋಪ ಮುಕ್ತಗೊಳಿಸ ಬೇಕೆಂದು ಕೋರಿರುತ್ತಾರೆ.

ಶ್ರೀ ನಿಂಗಯ್ಯ, ಎರಡನೆ ದರ್ಜೆ ಭೂಮಾಪಕರು ಇವರು ತಿಮ್ಲಾಪುರ ಗ್ರಾಮದ ಸ.ನಂ. 78 ರ ಮ್ಯುಟೇಷನ್ ಕಡತ ಭೂ.ಸ.ನಿ.ಎಂಪಿಆರ್:351/01–02 ಅನ್ನು ದಿನಾಂಕ:14.03.2002 ರಂದು ಅಳತೆ ಕೆಲಸಕ್ಕೆ ಕೊಟ್ಟಿದ್ದು, ಮಾರ್ಚ್ 02 ರ ತಾತ್ಕಾಲಿಕ ಪ್ರವಾಸದ ಕಾರ್ಯಕ್ರಮದ ಪಟ್ಟಿಯನ್ನು ಕಛೇರಿಗೆ ಸಲ್ಲಿಸಿದ್ದರಿಂದ, ಕೇಂದ್ರಕಛೇರಿಯ ಸುತ್ತೋಲೆ ದಿನಾಂಕ:12.06.1999 ರ ಪ್ರಕಾರ, ಸಂಬಂಧಿಸಿದ ಅಧಿಕಾರಿಗಳಿಂದ ಅನುಮೋದನೆ ಪಡೆದು, ಅಳತೆ ಕೆಲಸವನ್ನು ನಿಗಧಿತ ದಿನಾಂಕ:22.03.2002 ರ ಬದಲಾಗಿ 23.03.2002 ರಂದು ಕೈತಪ್ಪಿನಿಂದ ಆಗಿರುತ್ತದೆಯೆಂದು ಆದರೆ ಯಾವುದೇ ತಿದ್ದುಪಡಿಗೆ ಸಹಕರಿಸಿರುವುದಿಲ್ಲ ಎಂಬುದಾಗಿ ತಿಳಿಸುತ್ತಾ, ಆರೋಪಮುಕ್ತ ಗೊಳಿಸಬೇಕೆಂದು ಕೋರಿರುತ್ತಾರೆ.

ಶ್ರೀ ಅಂಥೋಣಿರಾಜ್, ಬಾಂದು ಜವಾನರು, ನನ್ನ ವಶಕ್ಕೆ ಸರ್ಕಾರಿ ರೆಕಾರ್ಡುಗಳು ಬರುವ ಅವಶ್ಯಕತೆ ಇಲ್ಲ. ದೂರವಾಣಿ ಮೂಲಕ ಯಾರಿಗೂ ಬೆದರಿಕೆ ಹಾಕಿರುವುದಿಲ್ಲ. ಹಾಗೇನಾದರೂ ಬೆದರಿಕೆ ಹಾಕಿದ್ದರೆ, ತಕ್ಷಣವೇ ಪೊಲೀಸ್ ಠಾಣೆಗೆ ದೂರು ನೀಡಿ ಕ್ರಮ ತೆಗೆದುಕೊಳ್ಳಬಹುದಾಗಿತ್ತು ಎಂದು ತಿಳಿಸಿ, ನನ್ನನ್ನು ಶಿಕ್ಷೆಗೆ ಗುರಿಪಡಿಸುವ ಉದ್ದೇಶದಿಂದ ಮಾಡಿರುವ ಆಪಾದನೆಯಾಗಿರುತ್ತದೆ ಎಂದು ಆದ್ದರಿಂದ ನನ್ನನ್ನು ಆರೋಪ ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ಆರೋಪಿತ ನೌಕರರುಗಳ ಬರಹ ಹೇಳಿಕೆಯಲ್ಲಿನ ಅಂಶಗಳನ್ನು, ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯೊಂದಿಗೆ ಪರಿಶೀಲಿಸಿದೆ.

ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು ಇವರ ಹೇಳಿಕೆ ಮತ್ತು ವಿಚಾರಣಾ ವರದಿಯನ್ನು ಪರಿಶೀಲಿಸಿದಾಗ, ಅಕ್ರಮ ತಿದ್ದುಪಡಿ ಮಾಡಿ ಇತರೆ ಸಹ ಆಪಾದಿತ ನೌಕರರುಗಳ ಪ್ರಚೋದನೆ ಮೇರೆಗೆ ಅಕ್ರಮ ತಿದ್ದುಪಡಿ ಮಾಡಿರುವುದಾಗಿ ತಿಳಿಸಿರುವುದು ಹಾಗೂ ನೌಕರರು ಎಲ್.ಆರ್. ಪ್ಕಕಾ ಬುಕ್ಕಿನಲ್ಲಿ ದಾಖಲಿಸಿದ ಬೇಸ್ ಮಾಫಿಗೆ ಅನುಗುಣವಾಗಿ ಮೂಲ ಟಿಪ್ಪಣಿಯಲ್ಲಿನ ಬೇಸ್ ಮಾಪನ್ನು ತಿದ್ದಿ ಕೊಟ್ಟಿರುತ್ತೇನೆ ಎಂದು ಒಪ್ಪಿಕೊಂಡಿದ್ದು, ಇದರಿಂದ ಸಾರ್ವಜನಿಕರಿಗೆ ತೊಂದರೆ ಉಂಟಾಗಿರುತ್ತದೆ. ನೌಕರರು ಮೇಲಾಧಿಕಾರಿಗಳ ಅನುಮತಿ ಇಲ್ಲದೇ ಅವರ ಹಂತದಲ್ಲಿಯೇ ಅಕ್ರಮ ತಿದ್ದುಪಡಿ ಮಾಡಿರುವುದು ನಿಯಮಗಳ ಉಲ್ಲಂಘನೆಯಾಗಿರುವುದು ವಿಚಾರಣಾಧಿಕಾರಿಗಳ ವರದಿ ಹಾಗೂ ಹೇಳಿಕೆಯನ್ನು ವಿಶ್ಲೇಷಿಸಿದಾಗ ಸ್ಪಷ್ಟವಾಗಿರುತ್ತದೆ.

ಶ್ರೀ ಹೆಚ್.ಜಿ. ರಮೇಶ್, ಎರಡನೇ ದರ್ಜೆ ಭೂಮಾಪಕರು, ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಸ.ನಂ.78 ರ ಟಿಪ್ಪಣಿಯಂತೆ 676 ಲಿಂಕ್ಸ್‌ಗಳು ಇರಬೇಕಾಗಿದ್ದು, ನೌಕರರು ಅಳತೆ ಮಾಡಿ 665 ಲಿಂಕ್ಸ್ ಎಂದು ದಾಖಲಿಸಿ 11–00 ಲಿಂಕ್ಸ್ ಎಂದು ವ್ಯತ್ಯಾಸ ಮಾಡಿರುತ್ತಾರೆ. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, ಕೋರ್ಟ್ ಕಮೀಷನರ್ ಆಗಿ ನೇಮಕಗೊಂಡು ನ್ಯಾಯಾಲಯಕ್ಕೆ ಸಹ ಸುಳ್ಳು ವರದಿಯನ್ನು ನೀಡಿರುತ್ತಾರೆ. ಮೂಲ ಟಿಪ್ಪಣಿಯಲ್ಲಿನ ಅಳತೆಯನ್ನು ಗಣನೆಗೆ ತೆಗೆದುಕೊಳ್ಳದೇ ತಪ್ಪಾಗಿ ಸ್ಕೆಚ್ ತಯಾರಿಸಿ, ಮೂಲ ದಾಖಲೆಗಳನ್ನು ಮೇಲಾಧಿಕಾರಿಗಳ ಅನುಮೋದನೆ ಇಲ್ಲದೇ ಅನಧಿಕೃತವಾಗಿ ಕಾನೂನು ಬಾಹಿರವಾಗಿ ತಿದ್ದಲು ನೌಕರರ ಸಹೋದ್ಯೋಗಿಗೆ ಹುರಿದುಂಬಿಸಿರುವುದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ.

ಶ್ರೀ ನಿಂಗಯ್ಯ, ಎರಡನೇ ದರ್ಜೆ ಭೂಮಾಪಕರು, ಇವರು ತಿಮ್ಲಾಪುರ ಗ್ರಾಮದ ಸ.ನಂ. 29 ರ ಪೈಕಿ ಹೊಸ ನಂ. 78 ರಲ್ಲಿ ಮ್ಯುಟೇಷನ್ ಪ್ರಕರಣ ಬಾಬ್ತು ಮ್ಯುಟೇಷನ್ ವಿಸ್ತೀರ್ಣ ಎಷ್ಟಿದೆ ಮತ್ತು ಇತರರ ವಿಸ್ತೀರ್ಣ ಎಷ್ಟಿದೆಯೆಂದು ಹಾಗೂ ಅನುಭವದಿಂದ ವಿಸ್ತೀರ್ಣಕ್ಕೆ ಹೊಂದಾಣಿಕೆ ಆಗುತ್ತದೆಯೇ ಇಲ್ಲವೇ ಎಂಬುದನ್ನು ಸ್ಥಳದಲ್ಲಿ ನಿಗಧಿಪಡಿಸಬೇಕಿದ್ದು, ಮೂಲ ಟಿಪ್ಪಣಿಯಲ್ಲಿಯ ಲೋಪ ಗಮನಕ್ಕೆ ಬಂದಿದ್ದರೂ ಸಹ ಮೇಲಾಧಿಕಾರಿಗಳ ಗಮನಕ್ಕೆ ತರದೇ ಇರುವುದು ದಾಖಲೆಗಳನ್ನು ಪರಿಶೀಲಿಸಿದಾಗ ಕಂಡು ಬಂದಿರುತ್ತದೆ.

ಶ್ರೀ ಎಂ. ಚೇತನ್, ದ್ವಿತೀಯ ದರ್ಜೆ ಭೂಮಾಪಕರು, ಇವರು ದುರಸ್ತಿ ಮಾಡಿದಂತಹ ಟಿಪ್ಪಣಿ ಕಾನೂನು ರೀತಿ ಸಕ್ರಮವಾಗಿದ್ದು, ಅದನ್ನು ಬದಲಾವಣೆ ಮಾಡಲಾದ ನೌಕರರಿಗೆ ಹಾಗೂ ಪಾರ್ಟಿಗಳಿಗೆ ಎಚ್ಚರಿಸಬೇಕಿದ್ದು, ಆ ರೀತಿ ಮಾಡದೇ, ಅಕ್ರಮ ತಿದ್ದುಪಡಿಗೆ ಪರೋಕ್ಷವಾಗಿ ಶಾಮೀಲಾಗಿರುವುದು ದಾಖಲೆಗಳಿಂದ ಕಂಡು ಬರುತ್ತದೆ.

ಶ್ರೀ ಅಂಥೋಣಿರಾಜ್, ಬಾಂದು ಜವಾನರು ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ, ಕಾರ್ಯವ್ಯಾಪ್ತಿ ಮೀರಿ ಇತರೆ ವಿಷಯಗಳಲ್ಲಿ ತಲೆ ತೂರಿಸಿ, ಅನಾವಶ್ಯಕ ವಿವಾದಗಳನ್ನು ಸೃಷ್ಟಿಸಿ, ಕಛೇರಿಯ ಇತರೆ ನೌಕರರಿಗೆ ಬೆದರಿಕೆಯನ್ನು ಹಾಕಿ ಬಾಂದು ಜವಾನರಾಗಿ ಕರ್ತವ್ಯ ನಿರ್ವಹಿಸುವ ಬದಲು, ಸಾರ್ವಜನಿಕರ ಮಧ್ಯವರ್ತಿಯಾಗಿ ಕೆಲಸ ನಿರ್ವಹಿಸಿರುವುದು ದಾಖಲೆಗಳನ್ನು ಪರಿಶೀಲಿಸಿದಾಗ ಸ್ಪಷ್ಟವಾಗಿ ಕಂಡು ಬರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು, ನೌಕರರುಗಳು ತಪ್ಪು ಎಸಗಿರುವುದು ಮನದಟ್ಟಾಗಿರುವುದರಿಂದ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತ ನೌಕರರುಗಳಾದ ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು, ಶ್ರೀ ಎಂ. ಚೇತನ್, ದ್ವಿತೀಯ ದರ್ಜೆ ಭೂಮಾಪಕರು, ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು ಶ್ರೀ ಅಂಥೋಣಿರಾಜ್, ಬಾಂದು ಜವಾನರು ಇವರುಗಳ ಮೇಲೆ ಮಾಡಲಾಗಿರುವ ದೋಷಾರೋಪಣೆ ಬಗ್ಗೆ ದಿನಾಂಕ:09.01.2007 ರ ಎರಡನೇ ಕಾರಣ ಕೇಳಿ ನೋಟೀಸಿಗೆ ಉತ್ತರವಾಗಿ, ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಸಂಬಂಧಿಸಿದ ವಿಚಾರಣಾ ವರದಿ ಮತ್ತು ವಿಚಾರಣಾ ಕಡತದೊಂದಿಗೆ ಪರಿಶೀಲಿಸಿದೆ. ವಿಚಾರಣಾಧಿಕಾರಿಗಳು ಆರೋಪಿತ ನೌಕರರುಗಳ ವಿರುದ್ಧ ಮಾಡಲಾಗಿರುವ ಆರೋಪಗಳು ಭಾಗಶಃ ಹಾಗೂ ಪೂರ್ಣ ಸಾಬೀತಾಗಿದೆಯೆಂದು ಅಭಿಪ್ರಾಯಪಟ್ಟಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಆರೋಪಿತ ನೌಕರರುಗಳು ತಪ್ಪೆಸಗಿರುವುದು ಮನದಟ್ಟಾಗಿರುವುದರಿಂದ, ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 9(2)(ಸಿ) ಹಾಗೂ 9(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8 (ii) ಮತ್ತು 8(iv)ಎ ಮತ್ತು 8(viii) ರನ್ವಯ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

1) ಶ್ರೀ ಎಂ.ಚೇತನ, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್, ದೊಡ್ಡಬಳ್ಳಾಪುರ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8 (ii) ರನ್ವಯ 'ವಾಗ್ದಂಡನೆ' ಯನ್ನು ವಿಧಿಸಿದೆ.

2) (i) ಶ್ರೀ ಹೆಚ್.ಜಿ. ರಮೇಶ್, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ಚನ್ನರಾಯಪಟ್ಟಣ, ಶ್ರೀ ನಿಂಗಯ್ಯ, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್, ಹಾಸನ ಮತ್ತು ಶ್ರೀ ಅಂಥೋಣಿರಾಜ್, ಬಾಂದು ಜವಾನರು, ಉಪ ವಿಭಾಗಾಧಿಕಾರಿಗಳು, ತರೀಕೆರೆ, ಇವರುಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8(iv)ಎ ರನ್ವಯ ನೌಕರರುಗಳು ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಪಡೆಯುತ್ತಿರುವ, ಮೂಲ ವೇತನ ಶ್ರೇಣಿಯಾದ ರೂ. 6250–12000 ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಅಂದರೆ ರೂ.6250/– ಕ್ಕೆ ಇಳಿಸಿದೆ, ಹಾಗೂ ಶ್ರೀ ಅಂಥೋಣಿರಾಜ್, ಬಾಂದು ಜವಾನರು, ಇವರಿಗೆ ಇವರು ಪಡೆಯುತ್ತಿರುವ ಮೂಲ ವೇತನ ಶ್ರೇಣಿಯಾದ ರೂ.5500–9500 ರ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಅಂದರೆ ರೂ.5500/–ಕ್ಕೆ ಇಳಿಸುವ ದಂಡನೆಯನ್ನು ವಿಧಿಸಿದೆ.

   (ii) ಮುಂದೆ ಲಭ್ಯವಾಗುವ ವಾರ್ಷಿಕ ವೇತನ ಬಡ್ತಿಯನ್ನು ನಿಯಮಗಳನುಸಾರ ಕನಿಷ್ಠ ವೇತನ ಹಂತದಿಂದ ನೀಡುವುದು.

3) ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್, ಹರಿಹರ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ಕಛೇರಿ ಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಕ್ರಮ ತಿದ್ದುಪಡಿ ಮಾಡಿ ಇತರೆ ಸಹ ಆಪಾದಿತ ನೌಕರರುಗಳ ಪ್ರಚೋದನೆ ಮೇರೆಗೆ, ಅಕ್ರಮ ತಿದ್ದುಪಡಿ ಮಾಡಿರುವುದಾಗಿ ತಿಳಿಸಿರುವುದು ಹಾಗೂ ಇವರು ಎಲ್.ಆರ್.ಪಕ್ಕಾ ಬುಕ್ಕಿನಲ್ಲಿ ಬೇಸ್ ಮಾಫಿಗೆ ಅನುಗುಣವಾಗಿ ಮೂಲ ಟಿಪ್ಪಣಿಯಲ್ಲಿನ ಬೇಸ್ ಮಾಫನ್ನು ತಿದ್ದಿ ಕೊಟ್ಟಿರುತ್ತೇನೆ ಎಂದು ನೌಕರರೇ ಒಪ್ಪಿಕೊಂಡಿರುತ್ತಾರೆ. ಭೂಮಾಪನ ಇಲಾಖೆಯಲ್ಲಿನ ದಾಖಲೆಗಳು ಮಹತ್ವಪೂರ್ಣವಾಗಿದ್ದು, ಇಂತಹ ಒಂದು ದಾಖಲೆಯನ್ನು ಮೇಲಾಧಿಕಾರಿಗಳ ಆದೇಶವಿಲ್ಲದೇ ಅಕ್ರಮ ತಿದ್ದಿರುವುದು ಮಹಾಪರಾಧವಾಗಿರುತ್ತದೆ ಮತ್ತು ವಿಚಾರಣೆಯಿಂದ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಸದರಿ ಅಪಾದಿತರನ್ನು ಸೇವೆಯಲ್ಲಿ ಮುಂದುವರೆಸಿದ್ದೇ ಆದರೆ ಈ ರೀತಿ ದುರ್ನಡತೆ ಪುನರಾವರ್ತನೆಯಾಗಿ ಸಾರ್ವಜನಿಕ ವ್ಯಾಜ್ಯಗಳು ಹೆಚ್ಚಾಗಿ ಇಲಾಖೆಗೆ ಕೆಟ್ಟ ಹೆಸರು ಬರುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಆಪಾದಿತರ ವಿರುದ್ಧ ಗಂಭೀರ ಸ್ವರೂಪದ ಆರೋಪವಾದ ಕಾರಣ, ಕರ್ನಾಟಕ

ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8(viii) ರನ್ವಯ, ಶ್ರೀ ಕೆ.ಪಿ. ಸಿದ್ದರಾಜು, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್, ಹರಿಹರ ಇವರನ್ನು ಸೇವೆಯಿಂದ ವಜಾಗೊಳಿಸಿದೆ.

ಈ ಆದೇಶವು ತಕ್ಷಣದಿಂದ ಜಾರಿಗೆ ಬರುತ್ತದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.945

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡೆವಳಿ**

**ವಿಷಯ:** ಶ್ರೀ ಆರ್.ವೈ. ಪಾಟೀಲ, ದ್ವಿ.ದ.ಭೂಮಾಪಕರು, ಹಾಲಿ ತಹಶೀಲ್ದಾರ್, ಹಾವೇರಿ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1) ಜಿಲ್ಲಾಧಿಕಾರಿಗಳು, ಹಾವೇರಿ ಇವರ ನಡೆವಳಿ ಸಂಖ್ಯೆ: ಸಿಬ್ಬಂದಿ/ ಅಗೈಹಾ/67/05–06, ದಿನಾಂಕ:05.04.2006, 07.05.2007, 16.06.2007, 24.09.2007 ಮತ್ತು 18.02.2009.
2) ವಿಚಾರಣಾಧಿಕಾರಿಗಳು, ವಿಚಾರಣಾ ವರದಿ ಸಲ್ಲಿಸಿದ ಸಂಖ್ಯೆ; ಸಿಬ್ಬಂದಿ/ಇಚಾ (11)/ವಹಿ 11/06–07, ದಿನಾಂಕ:08.09.2008.
3) ಈ ಕಛೇರಿಯ ಎರಡನೇ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ/ಶಿಸ್ತು ಅಗೈಹಾ 1/06–07, ದಿನಾಂಕ:20.04.2009 (ವಿಚಾರಣಾ ವರದಿ ಪ್ರತಿಯೊಂದಿಗೆ)
4) ಸರ್ಕಾರದ ಸುತ್ತೋಲೆ ಸಂ:ಸಿಆಸುಇ 18 ಸೇಇವಿ 2001, ದಿನಾಂಕ:14.09.2001.

**ಪ್ರಸ್ತಾವನೆ:**

ಶ್ರೀ ಆರ್.ವೈ. ಪಾಟೀಲ, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್, ಹಾವೇರಿ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾವೇರಿ ಕಛೇರಿ ವ್ಯಾಪ್ತಿಯ ತಾಲ್ಲೂಕು ಭೂಮಾಪನ ಕಛೇರಿ, ಹಿರೇಕೆರೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ:05.04.2004 ರಿಂದ 29.4.2004 ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ನಂತರ ಈ ಇಲಾಖೆಯು ಕಂದಾಯ ಇಲಾಖೆಯೊಂದಿಗೆ ಕಾರ್ಯವಿಲೀನಗೊಂಡ ನಂತರವು ಸಹ ದಿನಾಂಕ:01.04.2005 ರಿಂದ 30.06.2005 ರವರೆಗೆ ನಂತರ ದಿನಾಂಕ:05.09.2005 ರಿಂದ 22.04.2006 ರವರೆಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ, ಸಕ್ಷಮ ಪ್ರಾಧಿಕಾರಿಯಿಂದ ಪೂರ್ವಾನುಮತಿಯನ್ನು ಪಡೆಯದೇ, ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ನೌಕರರು ಗೈರು ಹಾಜರಾಗಿದ್ದ ಕಾರಣ, ಜಿಲ್ಲಾಧಿಕಾರಿಗಳು, ಹಾವೇರಿ ಇವರು ದಿ:5.4.2006 ರಂದು ಅಮಾನತ್ತುಗೊಳಿಸಿ, ನಂತರ ಶಿಸ್ತುಕ್ರಮದ ಇತ್ಯರ್ಥವನ್ನು ಕಾಯ್ದಿರಿಸಿ, ತಹಶೀಲ್ದಾರ್, ಹಾವೇರಿ ಕಛೇರಿಗೆ ಪುನರ್ ನೇಮಕಗೊಳಿಸಿ, ಜಿಲ್ಲಾಧಿಕಾರಿಗಳು, ಹಾವೇರಿ ರವರು ದಿನಾಂಕ:07.05.2007 ರಲ್ಲಿ ಆದೇಶಿಸಿರುತ್ತಾರೆ. ಅದರಂತೆ ದಿ: 10.05.2007 ರ ಪೂರ್ವಾಹ್ನ ನೌಕರರು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಈ ಬಗ್ಗೆ ಜಿಲ್ಲಾಧಿಕಾರಿಗಳು, ಹಾವೇರಿ ಇವರು ದಿ: 16.06.2007 ರ ನೋಟೀಸಿನೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಿರುತ್ತಾರೆ. ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ. (ಸದರಿ ನೌಕರರನ್ನು ಇನ್ನು ಮುಂದೆ ಆಪಾದಿತ ನೌಕರರೆಂದು ಕರೆಯಲಾಗಿದೆ)

"ನೀವು ದಿನಾಂಕ:05.04.2004 ರಿಂದ 29.04.2004 ರವರೆಗೆ ಮತ್ತು ದಿನಾಂಕ:01.04.2005 ರಿಂದ 30.06.2005 ರವರೆಗೆ ಹಾಗೂ ದಿನಾಂಕ:05.09.2005 ರಿಂದ 22.04.2006 ರವರೆಗೆ ನಿಲಂಬನೆ ಅದೇಶ ಜಾರಿ ಆಗುವವರೆಗೆ ಅನಧಿಕೃತ ಗೈರು ಹಾಜರಿರುತ್ತೀರಿ.

ನೀವು ಗೈರು ಹಾಜರಿಯಿಂದ ಮರಳಿ ಸರ್ಕಾರಿ ಕೆಲಸಕ್ಕೆ ಹಾಜರಾಗುವಂತೆ ದಿನಾಂಕ:08.04.2004, 16.04.2004 ಮತ್ತು 05.06.2004 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾವೇರಿ ಇವರು ಜ್ಞಾಪನ ನೀಡಿದರೂ ನೀವು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಮತ್ತು ತಾಲ್ಲೂಕು ಭೂಮಾಪನಾಧಿಕಾರಿಗಳು, ಹಿರೇಕೆರೂರು ಇವರು ದಿನಾಂಕ:20.04.2004 ರಂದು ಪುನ: ಹಾಜರಾಗುವಂತೆ ಜ್ಞಾಪನ ನೀಡಿದಾಗ್ಯೂ ಕರ್ತವ್ಯಕ್ಕೆ ಹಾಜರಾಗದೇ ಗೈರು ಉಳಿದು ಸರ್ಕಾರಿ ಕೆಲಸಕ್ಕೆ ಹಾಗೂ ಸಾರ್ವಜನಿಕರ ಕೆಲಸಕ್ಕೆ ತೊಂದರೆ ಮಾಡಿ ಬೇಜವಾಬ್ದಾರಿತನದಿಂದ ಕರ್ತವ್ಯಲೋಪವೆಸಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957 ನಿಯಮ 3(1) ಮತ್ತು (2) ಉಲ್ಲಂಘನೆ ಮಾಡಿ ಅಪರಾಧವೆಸಗಿರುತ್ತೀರಿ.

ನೀವು ಭೂಮಾಪನ ಕಛೇರಿಯು ತಹಶೀಲ್ದಾರ್ ಕಛೇರಿಯಲ್ಲಿ ವಿಲೀನ ಆದ ನಂತರ ಜುಲೈ 2005 ಮತ್ತು ಆಗಸ್ಟ್ – 2005 ನೇ ತಿಂಗಳುಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿ ತದ ನಂತರ ಪುನ: ದಿನಾಂಕ:05.09.2005 ರಿಂದ ನಿಲಂಬನೆ ಆದೇಶ ಜಾರಿ ಆಗುವವರೆಗೆ ಕರ್ತವ್ಯಕ್ಕೆ ಗೈರು ಹಾಜರು ಉಳಿದಿರುತ್ತೀರಿ."

ಆಪಾದಿತ ನೌಕರರು ದಿನಾಂಕ:20.06.2007 ರಂದು ಸ್ವೀಕರಿಸಿ, ದಿನಾಂಕ:14.08.2007 ರಂದು ಬರಹ ಹೇಳಿಕೆಯನ್ನು ಸಲ್ಲಿಸಿದ್ದು, ಸದರಿ ಬರಹ ಹೇಳಿಕೆಯಲ್ಲಿ ಅವರ ವಿರುದ್ದ ಮಾಡಲಾದ ಆರೋಪವನ್ನು ನಿರಾಕರಿಸಿರುವ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಉಪ ವಿಭಾಗಾಧಿಕಾರಿಗಳು, ಹಾವೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶಿರಸ್ತೇದಾರ ಸಿಬ್ಬಂದಿ ಶಾಖೆ, ಉಪ ವಿಭಾಗಾಧಿಕಾರಿಗಳ ಕಛೇರಿ, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ, ಜಿಲ್ಲಾಧಿಕಾರಿಗಳು, ಹಾವೇರಿ ಇವರು ದಿನಾಂಕ:24.09.2007 ರ ನಡವಳಿಯಲ್ಲಿ ನೇಮಕ ಮಾಡಿದಂತೆ, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ವಿಚಾರಣಾ ದಾಖಲೆಗಳೊಂದಿಗೆ ಜಿಲ್ಲಾಧಿಕಾರಿಗಳು, ಹಾವೇರಿ ಇವರಿಗೆ ಉಲ್ಲೇಖ(2) ರ ಪ್ರಕಾರ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ವಿಚಾರಣಾ ವರದಿಯೊಂದಿಗೆ ಮುಂದಿನ ಕ್ರಮಕ್ಕಾಗಿ ಈ ಕಛೇರಿಗೆ ದಿನಾಂಕ:18.02.2009 ರಂದು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆಪಾದಿತ ನೌಕರರ ವಿರುದ್ದ ಮಾಡಲಾದ ಆರೋಪವು ಸಾಬೀತಾಗಿರುವ ಕಾರಣ, ಉಲ್ಲೇಖ(3) ರನ್ವಯ, ಎರಡನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಜಾರಿ ಮಾಡಲಾಗಿದ್ದು, ಸದರಿ ನೋಟೀಸನ್ನು ದಿನಾಂಕ:02.05.2009 ರಂದು ಸ್ವೀಕರಿಸಿರುತ್ತಾರೆ. ಆದರೆ ಯಾವುದೇ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಆಪಾದಿತ ನೌಕರರು ಹಾಲಿ ತಹಶೀಲ್ದಾರ್, ಹಾವೇರಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿ ಕಛೇರಿಯಲ್ಲಿಯೂ ಸಹ ಅವರ ಸೇವೆ ತೃಪ್ತಿಕರವಾಗಿರುವುದಿಲ್ಲವೆಂದು ಹಾಗೂ ದಿನಚರಿಗೆ ಹಚ್ಚಿದ 49 ಪ್ರಕರಣಗಳನ್ನು ಬಾಕಿ ಇಟ್ಟುಕೊಂಡಿರುವ ಬಗ್ಗೆ ನೌಕರರ ವಿರುದ್ದ ಪುನಃ ಮತ್ತೊಂದು ಶಿಸ್ತು ಪ್ರಕರಣವನ್ನು ಪ್ರಾರಂಭಿಸಲಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು, ಹಾವೇರಿ ಇವರು ತಿಳಿಸಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಶ್ರದ್ಧೆ ಆಸಕ್ತಿ ಇಲ್ಲದಿರುವುದು ಕಂಡು ಬರುತ್ತಿದ್ದು, ಆಪಾದಿತ ನೌಕರರು ಗಂಭೀರವಾದ ಕರ್ತವ್ಯಲೋಪ ಮತ್ತು ದುರ್ನಡತೆ ಎಸಗಿರುತ್ತಾರೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1958 ರ ನಿಯಮ 108 ರ ಪ್ರಕಾರ ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ವಿಮುಖರಾಗಿ ಗೈರು ಹಾಜರಾಗುವ ನೌಕರರು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಯಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ, ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಆದ ಕಾರಣ, ಆಪಾದಿತ ನೌಕರರು 309 ದಿವಸ ಗೈರು ಹಾಜರಾಗಿರುವುದು ತೀವ್ರತರನಾದ ದುರ್ವರ್ತನೆ ಆಗಿರುವುದರಿಂದ ಹಾಗೂ ಅವರ ಸೇವೆಯು ತೃಪ್ತಿಕರವಾಗಿಲ್ಲದೇ ಸರ್ಕಾರಿ ಸೇವೆ ಮಾಡಲು ಅನರ್ಹರಾಗಿರುತ್ತಾರೆಂದು ಸ್ಪಷ್ಟವಾಗಿ ವರದಿ ಮಾಡಿರುವುದನ್ನು ಒಪ್ಪಿ, ಆಪಾದಿತ ನೌಕರರು ಅವರ ವಿರುದ್ದ ಮಾಡಲಾದ ಆರೋಪವನ್ನು ಅಲ್ಲಗೆಳೆಯುವಂತಹ ಸಾಕ್ಷಿ ದಾಖಲೆಗಳನ್ನು ಹಾಜರುಪಡಿಸದೇ, ಇರುವುದರಿಂದ ಹಾಗೂ ಎರಡನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಜಾರಿ ಮಾಡಿರುವುದನ್ನು ಸ್ವೀಕರಿಸಿ, ಇದುವರೆವಿಗೂ ಯಾವುದೇ ಬರಹ ಹೇಳಿಕೆಯನ್ನು ಸಲ್ಲಿಸದೇ ಇರುವುದನ್ನು ಗಮನಿಸಿದಾಗ, ನೌಕರರಿಗೆ ಸರ್ಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ಹಾಗೂ ಶ್ರದ್ಧೆ ಇಲ್ಲದಿರುವುದು ಕಂಡು ಬಂದಿದ್ದು ಹಾಗೂ ಅವರ ವಿರುದ್ದ ಮಾಡಲಾದ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಆಪಾದಿತರಿಗೆ ಕಠಿಣ ದಂಡನೆ ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಸಿಬ್ಬಂದಿ/ಶಿಸ್ತು ಅಗೈಹಾ 1/06–07, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು, ಈ ಪ್ರಕರಣದ ವಿಚಾರಣಾ ವರದಿ ಮತ್ತು ದಾಖಲೆಗಳನ್ನು ಹಾಗೂ ಜಿಲ್ಲಾಧಿಕಾರಿಗಳು, ಹಾವೇರಿ ಇವರ ವರದಿಯನ್ನು ಪರಿಶೀಲಿಸಲಾಗಿ, ಆಪಾದಿತ ನೌಕರರು ಹಾಲಿ ತಹಶೀಲ್ದಾರ್ ಕಛೇರಿ, ಹಾವೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಲ್ಲಿಯೂ ಸಹ ಅವರ ಸೇವೆ ತೃಪ್ತಿಕರವಾಗಿರುವುದಿಲ್ಲ ಎಂಬ ಅಂಶವನ್ನು ಪರಿಗಣಿಸಿ, ಆರೋಪ ಸಾಬೀತಾಗಿರುವ ಕಾರಣ, ನೀಡಲಾದ ಎರಡನೇ ಕಾರಣ ಕೇಳಿ ನೋಟೀಸಿಗೆ ತನ್ನನ್ನು ಸಮರ್ಥಿಸಿಕೊಳ್ಳುವ ಯಾವುದೇ ದಾಖಲೆಯೊಂದಿಗೆ ಪ್ರತಿರಕ್ಷಣಾ ಹೇಳಿಕೆಯನ್ನು ನೀಡದಿರುವ ಹಾಗೂ ದೀರ್ಘಾವಧಿ ಅನಧಿಕೃತ ಗೈರು ಹಾಜರಿಯಾಗಿರುವ ಅಂಶವನ್ನು ಗಮನಿಸಿದಾಗ, ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧೆ ಆಸಕ್ತಿ ಇಲ್ಲದಿರುವುದು ಕಂಡು ಬಂದಿರುತ್ತದೆ. ಆದಕಾರಣ, ಶ್ರೀ ಆರ್.ವೈ. ಪಾಟೀಲ್, ದ್ವಿತೀಯ ದರ್ಜೆ ಭೂಮಾಪಕರು ಇವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ಅಭಿಪ್ರಾಯಪಟ್ಟು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 9(3) ರೊಂದಿಗೆ ಓದಿಕೊಂಡ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ವೈ. ಪಾಟೀಲ್, ದ್ವಿತೀಯ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್ ಕಛೇರಿ, ಹಾವೇರಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.963

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/74/ಡಿಟಿಸಿಆರ್/2008–09 ದಿನಾಂಕ:25ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ,
ಪುತ್ತೂರು.

**ಆರೋಪಿಗಳು:**

ಮಹಮ್ಮದ್ ಹನೀಫ್(29 ವ),
ಬಿನ್:ಸಂಶುದ್ದೀನ್, ಪೆರಿಯಡ್ಕ ಮನೆ, ಕುಡಾಲ, ಮೆರ್ಕಳ ಗ್ರಾಮ ಮತ್ತು ಅಂಚೆ, ಪೆರ್ಮುದೆ, ಕಾಸರಗೋಡು, ಕೇರಳ ಮತ್ತು ಅಬ್ದುಲ್ ಲತೀಫ್.

**ವಾಹನ ಮಾಲೀಕರು:**

ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31–08–2008 ರಂದು ರಾತ್ರಿ 9–45 ಗಂಟೆ ಸಮಯದಲ್ಲಿ ಫಿರ್ಯಾದುದಾರರಿಗೆ ದೂರವಾಣಿ ಕರೆ ಮುಖಾಂತರ ಪುತ್ತೂರು ತಾಲೂಕು ಆರ್ಯಾಪು ಗ್ರಾಮದ ಪಿಲಿಕುಂಡ ಎಂಬಲ್ಲಿ ಒಂದು ಕಾರು ರಸ್ತೆಯ ಬದಿಯ ಆಳಕ್ಕೆ ಮಗುಚಿ ಬಿದ್ದಿರುವುದಾಗಿ ತಿಳಿಸಿರುವ ಖಚಿತ ಮಾಹಿತಿಯ ಮೇರೆಗೆ, ಫಿರ್ಯಾದುದಾರರು ರಾತ್ರಿ 10–15 ಗಂಟೆ ಸಮಯಕ್ಕೆ ಸದರಿ ಸ್ಥಳಕ್ಕೆ ತಮ್ಮ ಸಿಬ್ಬಂದಿಯವರೊಂದಿಗೆ ಹೋಗಿ ಪರಿಶೀಲಿಸಿದಾಗ, ಕಾರು ರಸ್ತೆ ಬದಿಯ ಆಳಕ್ಕೆ ಮಗುಚಿ ಬಿದ್ದುಕೊಂಡಿದ್ದು ಅದನ್ನು ಪರಿಶೀಲಿಸಿದಾಗ, ಕಾರಿನ ಒಳಗಡೆ ಸಾರಾಯಿ ತುಂಬಿದ ಸ್ಯಾಚೆಟ್‌ಗಳಿದ್ದು ಹಾಗೂ ಕಾರಿನ ಒಳಗಡೆ ಒಬ್ಬ ವ್ಯಕ್ತಿ ಸಿಲುಕಿಕೊಂಡಿರುತ್ತಾನೆ. ಆತನನ್ನು ನಿಧಾನವಾಗಿ ಕಾರಿನ ಒಳಗಡೆಯಿಂದ ಹೊರಗೆ ತೆಗೆದು ಆತನನ್ನು ವಿಚಾರಿಸಿದಾಗ, ಆತನು ತನ್ನ ಹೆಸರು ಮಹಮ್ಮದ್ ಹನೀಫ್(29 ವ), ಬಿನ್:ಸಂಶುದ್ದೀನ್, ಪೆರಿಯಡ್ಕ ಮನೆ, ಕುಡಾಲ, ಮೆರ್ಕಳ ಗ್ರಾಮ ಮತ್ತು ಅಂಚೆ, ಪೆರ್ಮುದೆ, ಕಾಸರಗೋಡು, ಕೇರಳ ಎಂದು ಮತ್ತು ಕಾರಿನ ಚಾಲಕ ಅಬ್ದುಲ್ ಲತೀಫ್ ಎಂಬುವವನು ಕಾರು ಕೆಳಗೆ ಬಿದ್ದ ಕೂಡಲೇ ಆತನು ಕಾರಿನಿಂದ ಹೊರಗೆ ಬಂದು ಪರಾರಿಯಾಗಿರುತ್ತಾನೆ ಎಂದು ತಿಳಿಸಿದನು. ಕಾರಿನ ಒಳಗಡೆ ಇದ್ದ ಸಾರಾಯಿ ಸ್ಯಾಚೆಟ್‌ಗಳ ಬಗ್ಗೆ ವಿಚಾರಿಸಲಾಗಿ, ಕರ್ನಾಟಕದಿಂದ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದಾಗಿ ತಿಳಿಸಿದನು. ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಲು ದಾಖಲೆ ಪತ್ರ ಹಾಗೂ ಪರವಾನಿಗೆ ಇದೆಯೇ ಎಂದು ವಿಚಾರಿಸಲಾಗಿ, ತನ್ನ ಬಳಿ ಯಾವುದೂ ಇಲ್ಲವೆಂದು ತಿಳಿಸಿರುವ ಮೇರೆಗೆ ಪಂಚರನ್ನು ಸ್ಥಳಕ್ಕೆ ಬರಮಾಡಿಕೊಂಡು, ಪಂಚರ ಸಮಕ್ಷಮ ಮಾರುತಿ ಆಲ್ಟೊ ಕಾರಿನ ಒಳಗಡೆಯಿರುವ ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದು ಪರಿಶೀಲಿಸಿದಾಗ, ಅದರಲ್ಲಿ ಒಟ್ಟು 10 ಪಾಲಿಥಿನ್ ಚೀಲಗಳಲ್ಲಿ ತಲಾ 450 ರಂತೆ ಒಟ್ಟು 100 ಎಂ.ಎಲ್.ನ 4500 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರತಿಯೊಂದು ಪಾಲಿಥಿನ್ ಚೀಲಗಳಿಂದ ತಲಾ 100 ಎಂ.ಎಲ್.ನ 5 ರಂತೆ ಸಾರಾಯಿ ಸ್ಯಾಚೆಟ್‌ಗಳನ್ನು ಪ್ರತ್ಯೇಕಿಸಿ, ಅದಕ್ಕೆ ಬಿಳಿ ಬಟ್ಟೆಯಿಂದ ಸುತ್ತಿ ಅರಗು ಸೀಲ್ ಮಾಡಿ ಎಸ್.ಹೆಚ್.ಒ. ಮೊಹರು ಹಾಕಿ, ಪಂಚರು ಹಾಗೂ ತನಿಖಾಧಿಕಾರಿಯವರ ಸಹಿಯಿರುವ ಚೀಟಿಯನ್ನು ಮಾದರಿಯಾಗಿ ತೆಗೆದಿರುವ ಸಾರಾಯಿ ಸ್ಯಾಚೆಟ್‌ಗಳಿಗೂ ಹಾಗೂ ಸೊತ್ತುಗಳಿಗೆ ಅಂಟಿಸಲಾಯಿತು.

ಸಾಗಾಟಕ್ಕೆ ಬಳಸಿದ ಮಾರುತಿ ಕಂಪೆನಿಯ ಆಲ್ಟೊ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಅದರ ನಂಬರು ಪ್ಲೇಟ್ ಕಾರು ಅಪಘಾತಕ್ಕೆ ಒಳಗೊಂಡಿರುವುದರಿಂದ ಪಕ್ಕದಲ್ಲಿ ತುಂಡಾಗಿ ಬಿದ್ದುಕೊಂಡಿದ್ದು, ಅದರ ನಂಬರು ಕೆಎ–19–ಪಿ–5239 ಎಂದು ಬರೆದಿರುವುದು ಕಂಡು ಬಂತು ಮತ್ತು ಇದರ ಪಕ್ಕದಲ್ಲಿ ಮತ್ತೊಂದು ನಂಬರು ಕೆಎಲ್–14–ಜಿ–2359 ಎಂದು ಅಳವಡಿಸಿರುವುದು ಕಂಡು ಬಂತು. ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಗಳು ನಕಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸಿ ಅಕ್ರಮವಾಗಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32,34 ಮತ್ತು 43ಎ ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಆರೋಪಿಗಳ ವಿರುದ್ದ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರು ತಕ್ಷೀರು ಸಂ:87/2008 ದಿ:01–09–2008 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಂದಿನ ತನಿಖೆಯ ಬಗ್ಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ ದಿ:30–9–2008 ರ ಅನುಸಾರ, ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡಿರುವ ಸೊತ್ತುಗಳನ್ನು ದಿ:7–11–2008 ರಂದು ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ, ಪುತ್ತೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ಮುಟ್ಟುಗೋಲು ಕ್ರಮದ ಬಗ್ಗೆ ತನಿಖೆಯನ್ನು ಮುಂದುವರಿಸಿದ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ,ಪುತ್ತೂರು ಇವರ ವರದಿ ಸಂಖ್ಯೆ:ಆರ್‌ಸಿಆರ್/31/2008–09 ದಿ:4–3–2009 ರ ತನಿಖಾ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಪೊಲೀಸ್ ಉಪ ನಿರೀಕ್ಷಕರು ಇವರ ಮುಖಾಂತರ ಕಳುಹಿಸಲಾಗಿದ್ದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–463–10 ದಿ:15–10–2008 ರ ವರದಿಯಲ್ಲಿ, ಸಾರಾಯಿಯ ಮದ್ಯಸಾರ ಪ್ರಮಾಣ ಶೇ.28.5 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ/74/ಡಿಟಿಸಿಆರ್/2008–09 ದಿ:11–6–2009 ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಸಮಕ್ಷಮ ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ: ಆರ್‌ಸಿಆರ್/31/2008–09 ದಿ:15–6–2009 ರ ತನಿಖಾ ವರದಿಯಲ್ಲಿ, ವಶಪಡಿಸಿಕೊಂಡ ಆಲ್ಟೋ ಕಾರಿನ ನಕಲಿ ನೋಂದಣಿ ಸಂಖ್ಯೆ: ಕೆಎ–19–ಪಿ–5239 ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಲ್ಲಿ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರು ದಿ: 16–1–2009 ರಂದು ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ನಂಬರಿನಲ್ಲಿ ನೋಂದಾಯಿಸಲಾಗಿರುವ ವಾಹನವು ಟಾಟಾ ಇಂಡಿಕಾ ಡಿಎಲ್‌ಜಿ–ವಿ2 ಆಗಿದ್ದು, ಇದರ ನೋಂದಣಿ ಸಂಖ್ಯೆ: ಕೆಎ–19–ಪಿ–5239 ಆಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಮಾರುತಿ ಕಂಪೆನಿಯ ತಯಾರಿಕಾ ಆಲ್ಟೋ ಕಾರಿನ ಚಾಸೀಸ್ ನಂಬರಿಗೂ ಹಾಗೂ ಇಂಜಿನ್ ನಂಬರಿಗೂ ಸಾರಿಗೆ ಅಧಿಕಾರಿಯವರು ಸಲ್ಲಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ನಮೂದಿಸಿದ ಚಾಸೀಸ್ ನಂಬರು ಹಾಗೂ ಇಂಜಿನ್ ನಂಬರು ಒಂದಕ್ಕೊಂದು ತಾಳೆಯಾಗಿರುವುದಿಲ್ಲ ಮತ್ತು ಸದರಿ ವಾಹನದಲ್ಲಿರುವ ಇನ್ನೊಂದು ನಂಬರು ಪ್ಲೇಟ್‌ನ ನೋಂದಣಿ ಸಂಖ್ಯೆ: ಕೆಎಲ್–14–ಜಿ–2359 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾಸರಗೋಡು ಜಿಲ್ಲೆ, ಕೇರಳ ಇವರನ್ನು ದಿ: 13–1–2009 ಮತ್ತು ದಿ:11–2–2009 ರಂದು ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ತರಿಸಲು ಪತ್ರ ಬರೆಯಲಾಗಿದ್ದು, ಇದುವರೆಗೂ ಅವರಿಂದ ಯಾವುದೇ ವರದಿ ಸ್ವೀಕೃತವಾಗಿರುವುದಿಲ್ಲ. ಸದರಿ ತಕ್ಷೀರಿನಲ್ಲಿ ಅಕ್ರಮ ಸಾರಾಯಿ ಸಾಗಾಟಕ್ಕೆ ಬಳಸಿದ ಆಲ್ಟೋ ಕಾರನ್ನು ಆರೋಪಿಗಳು ಹಾಗೂ ವಾಹನದ ಮಾಲೀಕರು ನಕಲಿ ನಂಬರನ್ನು ಅಳವಡಿಸಿ, ಕರ್ನಾಟಕ ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ತಕ್ಷೀರು ದಾಖಲಿಸಿ ಒಂದು ವರ್ಷ ಒಂದು ತಿಂಗಳು ಕಳೆದರೂ ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಮತ್ತು ದಸ್ತಗಿರಿಯಾದ ಆರೋಪಿ ಮತ್ತು ಪರಾರಿಯಾದ ಆರೋಪಿ ಇವರುಗಳು ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಹಾಗೂ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಕಚೇರಿಯಲ್ಲಿ ಯಾರೂ ಕೂಡಾ ವಾಹನದ ಮಾಲಿಕತ್ವದ ಬಗ್ಗೆ ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಬಿಡುಗಡೆಗಾಗಿ ಇದುವರೆಗೂ ಅರ್ಜಿ ಸಲ್ಲಿಸಿರುವುದಿಲ್ಲ. ಈ ವಾಹನವನ್ನು ಅಕ್ರಮ ಸಾರಾಯಿ ಸಾಗಾಟಕ್ಕೆ ಆರೋಪಿಗಳು ಉಪಯೋಗಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಕಾರಣ, ಸದ್ರಿ ಆಲ್ಟೋ ಕಾರನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ:31–8–2008 ರಂದು ಮಾರುತಿ ಕಂಪೆನಿಯ ಆಲ್ಟೋ ಕಾರಿನ ನಕಲಿ ನೋಂದಣಿ ಸಂಖ್ಯೆ: ಕೆಎ–19–ಪಿ–5239 ಮತ್ತು ಕೆಎಲ್–14–ಜಿ–2359 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) **ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳು ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೆ

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಾಸಾ: 1

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ದಿ:15–9–09 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಸಪ್ಟೆಂಬರ್–2005 ರಿಂದ ಇಲ್ಲಿಯವರೆಗೆ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಕರಣಕ್ಕೆ ಸಂಬಂಧಿಸಿದ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಫಿರ್ಯಾದಾದಾರರು ಇವರ ವಶಕ್ಕೆ ಹಸ್ತಾಂತರಿಸಲಾಗಿದ್ದು, ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ ಇವರು ಸಲ್ಲಿಸಿದ ರಾಸಾಯನಿಕ ಕೆಮಿಕಲ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ತನಿಖಾ ವರದಿಯನ್ನು ಸಲ್ಲಿಸಿರುತ್ತೇನೆ. ಸದರಿ ರಾಸಾಯನಿಕ ವರದಿಯನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ತನಿಖಾ ವರದಿಯನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ತಕ್ಷೀರಿಗೆ ಸಂಬಂಧಿಸಿದ ನಕಲಿ ಪ್ಲೇಟ್‌ನ ನೋಂದಣಿ ಸಂಖ್ಯೆ: ಕೆಎ–19–ಪಿ–5239 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ವಾಹನವು ಟಾಟಾ ಇಂಡಿಕಾ ಕಾರು ಆಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಚಾಸೀಸ್ ನಂಬರಿಗೂ, ಇಂಜಿನ್ ನಂಬರಿಗೂ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಸದರಿ ಬಿ ವರದಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಇನ್ನೊಂದು ನಂಬರು ಪ್ಲೇಟ್‌ನ ಸಂಖ್ಯೆ: ಕೆಎಲ್–14–ಜಿ–2359 ರ ಬಿ ವರದಿಯನ್ನು ಪಡೆಯಲು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಯವರನ್ನು ಸಂಪರ್ಕಿಸಿ, ಇದುವರೆಗೂ ಯಾವುದೇ ಬಿ ಎಕ್ಸ್‌ಟ್ರ್ಯಾಕ್ಟ್ ವರದಿ ಸ್ವೀಕೃತವಾಗಿರುವುದಿಲ್ಲ. ಆದುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರನ್ನು ವಶಪಡಿಸಿಕೊಂಡು ಈಗಾಗಲೇ ಒಂದು ವರ್ಷ ಕಳೆದಿದ್ದು ವಾಹನದ ಮಾಲೀಕರಾಗಲಿ, ಆರೋಪಿಯಾಗಲಿ ಅಥವಾ ಅವರ ಪರ ವಕೀಲರಾಗಲಿ, ಪೊಲೀಸ್ ಇಲಾಖೆ ಹಾಗೂ ತಮ್ಮ ಕಚೇರಿಯಲ್ಲಿ ಯಾರೂ ಕೂಡಾ ವಾಹನದ ಬಿಡುಗಡೆಗಾಗಿ ಇದುವರೆಗೂ ಅರ್ಜಿ ಸಲ್ಲಿಸಿರುವುದಿಲ್ಲ. ಸದರಿ ಆಲ್ಟೊ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಹೊಂದಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದರಿಂದ, ಸದರಿ ಆಲ್ಟೊ ಕಾರನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿ:15–6–2009 ರಂದು ಈ ಪ್ರಾಧಿಕಾರಕ್ಕೆ ತನಿಖಾ ವರದಿಯನ್ನು ಸಲ್ಲಿಸಿರುತ್ತೇನೆ. ತನಿಖಾ ವರದಿಯನ್ನು ನಿಶಾನೆ ಪಿ–4 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:31–8–2008 ರಂದು ಜಪ್ತುಪಡಿಸಿಕೊಂಡಿರುವ ಮಾರುತಿ ಕಂಪೆನಿಯ ಆಲ್ಟೊ ಕಾರಿನ ನಕಲಿ ನೋಂದಣಿ ಸಂಖ್ಯೆ: ಕೆಎ–19–ಪಿ–5239 ಮತ್ತು ಕೆಎಲ್–14–ಜಿ–2359 ರಲ್ಲಿ ನಕಲಿ ನಂಬರು ಅಳವಡಿಸಿ ಅಕ್ರಮವಾಗಿ 100 ಎಂ.ಎಲ್.ನ 4500 ಸಾರಾಯಿ ಸ್ಯಾಚೆಟ್‌ಗಳನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಆಧಾರಿತ ನೈಜ ದಾಖಲೆಗಳೊಂದಿಗೆ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಂಡು ಇದನ್ನು ನಕರಾತ್ಮಕವಾಗಿ ಪರಿಗಣಿಸಿದೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ 100 ಎಂ.ಎಲ್.ನ 4500 ಸಾರಾಯಿ ತುಂಬಿದ ಸ್ಯಾಚೆಟ್‌ಗಳು ಒಟ್ಟು 450 ಲೀಟರ್ ಸಾರಾಯಿಯನ್ನು ಸಾಗಾಣಿಕೆ ಮಾಡುವಾಗ, ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಸಾರಾಯಿ ಎಂದು ದೃಢಪಟ್ಟಿದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ "ಬಿ" ಎಕ್ಸ್‌ಟ್ರ್ಯಾಕ್ಟ್ ವರದಿ ಪ್ರಕಾರ ಆರೋಪಿಗಳು ನಕಲಿ ನೋಂದಣಿ ನಂಬರು ಬಳಸಿ ವಾಹನವನ್ನು ಬಳಸಿರುವುದು ಸಾಬೀತಾಗಿರುವುದರಿಂದ, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14, 32 ಮತ್ತು 38ಎ ರ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಕಂಪೆನಿಯ ಆಲ್ಟೊ ಕಾರಿನ ನಕಲಿ ನೋಂದಣಿ ಸಂಖ್ಯೆ:ಕೆಎ–19–ಪಿ–5239 ಮತ್ತು ಕೆಎಲ್–14–ಜಿ–2359 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಒಂದು ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ ಮತ್ತು ತನಿಖಾಧಿಕಾರಿಯವರ ಕಚೇರಿ, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರಾಗಲಿ ಹಾಗೂ ದಸ್ತಗಿರಿಯಾದ ಆರೋಪಿ ಮತ್ತು ಪರಾರಿಯಾದ ಆರೋಪಿಯು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ತನಿಖಾಧಿಕಾರಿಯವರು ಸಲ್ಲಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಕಂಪೆನಿಯ ಆಲ್ಟೊ ಕಾರಿನ ನಕಲಿ ನೋಂದಣಿ ಸಂಖ್ಯೆ: ಕೆಎ–19–ಪಿ–5239 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ, ಸದರಿ ವಾಹನವು ಟಾಟಾ ಇಂಡಿಕಾ ಡಿಎಲ್‌ಜಿ–ವಿ2 ಆಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರಿನ ಚಾಸೀಸ್ ನಂಬರಿಗೂ ಹಾಗೂ ಇಂಜಿನ್ ನಂಬರಿಗೂ ಸಾರಿಗೆ ಅಧಿಕಾರಿಯವರು ಸಲ್ಲಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ನಮೂದಿಸಿದ ಟಾಟಾ ಇಂಡಿಕಾ ಕಾರಿನ ಚಾಸೀಸ್ ನಂಬರು ಹಾಗೂ ಇಂಜಿನ್ ನಂಬರು ಒಂದಕ್ಕೊಂದು ತಾಳೆಯಾಗಿರುವುದಿಲ್ಲ ಮತ್ತು ಸದರಿ ವಾಹನದಲ್ಲಿರುವ ಇನ್ನೊಂದು ನಂಬರು ಪ್ಲೇಟ್ ನೋಂದಣಿ ಸಂಖ್ಯೆ: ಕೆಎಲ್–14–ಜಿ–2359 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಕಾಸರಗೋಡು ಜಿಲ್ಲೆ,ಕೇರಳ ಇವರನ್ನು ದಿ:13-1-2009 ಮತ್ತು ದಿ:11-2-2009 ರಂದು ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ತರಿಸಲು ಪತ್ರ ಬರೆಯಲಾಗಿದ್ದು, ಇದುವರೆಗೂ ಅವರಿಂದ ಯಾವುದೇ ವರದಿ ಸ್ವೀಕೃತವಾಗಿರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ. ಆದುದರಿಂದ ತನಿಖಾಧಿಕಾರಿಯವರ ತನಿಖಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ವಾಹನದ ಮಾಲೀಕರು ಹಾಗೂ ಆರೋಪಿಗಳು ಆಲ್ಟೊ ಕಾರಿಗೆ ನಕಲಿ ನಂಬರನ್ನು ಅಳವಡಿಸಿ ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ರಾಜ್ಯದಿಂದ ಕೇರಳಕ್ಕೆ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಆದುದರಿಂದ ಅಕ್ರಮ ಸಾರಾಯಿ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರನ್ನು ಈಗಾಗಲೇ ಒಂದು ವರ್ಷ ಒಂದು ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಅಕ್ರಮ ಸಾರಾಯಿ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ ಕಂಪೆನಿಯ ಆಲ್ಟೊ ಕಾರಿನ ನಕಲಿ ನೋಂದಣಿ ಸಂಖ್ಯೆ:ಕೆಎ–19–ಪಿ–5239 ಮತ್ತು ಕೆಎಲ್–14–ಜಿ–2359 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/74/ಡಿಟಿಸಿಆರ್/2008–09 ದಿನಾಂಕ:25ನೇ ಸೆಪ್ಟೆಂಬರ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರ ತಕ್ಷೀರು ಸಂ:87/2008 ದಿ:1-9-2008 ರಲ್ಲಿ ಜಪ್ತುಪಡಿಸಿರುವ ಮಾರುತಿ ಕಂಪೆನಿಯ ಆಲ್ಟೊ ಕಾರಿನ ನಕಲಿ ನೋಂದಣಿ ಸಂಖ್ಯೆ: ಕೆಎ–19–ಪಿ–5239 ಮತ್ತು ಕೆಎಲ್–14–ಜಿ–2359 ನ್ನು (ಚಾಸೀಸ್ ನಂಬರು ಎಂಎ3ಇವೈಡಿ818010369502/ಜೆ7 ಮತ್ತು ಇಂಜಿನ್ ನಂಬರು 78ಡಿಎನ್ 3453187) ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:25-09-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಅನುಬಂಧ–1

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ–1: ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

ಅನುಬಂಧ–2

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ–1 : ಕೆಮಿಕಲ್ ವರದಿ.
ನಿಶಾನೆ ಪಿ–2 : ತನಿಖಾ ವರದಿ.
ನಿಶಾನೆ ಪಿ–2A : ತನಿಖಾ ವರದಿಯಲ್ಲಿರುವ ತನಿಖಾಧಿಕಾರಿಯವರ ಸಹಿ.
ನಿಶಾನೆ ಪಿ–3 : ಬಿ ಅಬ್‌ಸ್ಟ್ರ್ಯಾಕ್ಟ್ ವರದಿ
ನಿಶಾನೆ ಪಿ–4 : ಮುಟ್ಟುಗೋಲು ಹಾಕಿಕೊಳ್ಳಲು ತನಿಖಾ ವರದಿ
ನಿಶಾನೆ ಪಿ–4ಎ : ತನಿಖಾ ವರದಿಯಲ್ಲಿರುವ ತನಿಖಾಧಿಕಾರಿಯವರ ಸಹಿ.

ಅನುಬಂಧ–3

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

ಅನುಬಂಧ–4

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1026

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/352/ಡಿಟಿಸಿಆರ್/2008–09, ದಿನಾಂಕ:21ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಸುಳ್ಯ ವಲಯ, ಸುಳ್ಯ.

**ಆರೋಪಿಗಳು:**
ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**
ಎನ್.ಎ.ಪ್ರಕಾಶ್, ಬಿನ್:ಎನ್.ಎಲ್.ಆನಂದ, ನಿಡಿಂಜೆ ಮನೆ,
ಬಳೆಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:18-4-2009 ರಂದು ರಾತ್ರಿ 10-45 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು ಮತ್ತು ಸಿಬ್ಬಂದಿಯವರು ಸುಳ್ಯ ತಾಲೂಕು ತೋಡಿಕಾನ ಗ್ರಾಮದ ಅರಂತೋಡಿನಿಂದ ತೋಡಿಕಾನ ರಸ್ತೆಯ ಅಡ್ಯನಡ್ಕ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಒಂದು ಬಜಾಜ್ ಎಂ–80 ಅತೀ ವೇಗವಾಗಿ ಹೋಗುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಆತನು ನಿಲ್ಲಿಸದೆ ಮುಂದಕ್ಕೆ ಚಲಾಯಿಸಿಕೊಂಡು ಹೋದನು. ಸಂಶಯದ ಮೇರೆಗೆ ಸದರಿ ವಾಹನವನ್ನು ಬೆನ್ನಟ್ಟಿದಾಗ, ಸದರಿ ವಾಹನದಲ್ಲಿ ಇಬ್ಬರು ವ್ಯಕ್ತಿಗಳಿದ್ದು, ಅವರಲ್ಲಿ ಒಂದು ರಟ್ಟಿನ ಪೆಟ್ಟಿಗೆ ಇರುವುದು ಕಂಡು ಬಂತು. ಸದರಿ ವಾಹನವು ತೋಡಿಕಾನ ರಸ್ತೆಯ ಅಡ್ಯನಡ್ಕ ಎಂಬಲ್ಲಿ ಸದರಿ ವ್ಯಕ್ತಿಗಳು ವಾಹನ ಮತ್ತು ರಟ್ಟಿನ ಪೆಟ್ಟಿಗೆಯನ್ನು

ರಸ್ತೆಯ ಬದಿಯಲ್ಲಿ ಬಿಟ್ಟು ಓಡಿ ಹೋಗಿ ತಲೆಮರೆಸಿಕೊಂಡಿರುತ್ತಾರೆ. ಆ ಸಮಯ ರಾತ್ರಿಯಾಗಿರುವುದರಿಂದ, ಸದರಿ ವ್ಯಕ್ತಿಗಳನ್ನು ಗುರುತು ಹಿಡಿಯಲು ಸಾಧ್ಯವಾಗಿರುವುದಿಲ್ಲ. ರಟ್ಟಿನ ಪೆಟ್ಟಿಗೆಯನ್ನು ಪರಿಶೀಲಿಸಿದಾಗ, ಒರಿಜಿನಲ್ ಚಾಯ್ಸ್ ಎಂಬ ವಿಸ್ಕಿಯ 180 ಎಂ.ಎಲ್.ನ 27 ಸೀಸೆಗಳಿರುವುದು ಕಂಡು ಬಂತು. ಸದರಿ ವಾಹನದ ಶೋಧನಾ ಕಾರ್ಯ ನಡೆಸಲು ಮಾನ್ಯ ನ್ಯಾಯಾಲಯದಿಂದ ಸರ್ಮೋಚಿತ ಆಧಾರ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಯಾರೂ ಸಾಕ್ಷಿದಾರರು ಸಿಗದ ಪ್ರಯುಕ್ತ ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿಯನ್ನಾಗಿರಿಸಿಕೊಂಡು ವಾಹನವನ್ನು ಪೂರ್ಣ ತಪಾಸಣೆ ನಡೆಸಿದಾಗ, ವಾಹನದ ನೋಂದಣಿ ಸಂಖ್ಯೆ: ಕೆಎ–12–ಇ–5915, ಇದು ಬಜಾಜ್ ಎಂ–80 ಆಗಿದ್ದು, ಮದ್ಯವನ್ನು ಸಾಗಾಟ ಮಾಡಲು ಯಾವುದೇ ದಾಖಲೆ ಪತ್ರಗಳು ದೊರೆತ್ತಿಲ್ಲದ ಕಾರಣ, ಇದು ಅಕ್ರಮ ಮದ್ಯವೆಂದು ಪರಿಗಣಿಸಿ ದೊರೆತ ಮದ್ಯದಿಂದ 180 ಎಂ.ಎಲ್.ನ ಒಂದು ಬಾಟ್ಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಬಟ್ಟೆದಾರ ಕಟ್ಟಿ, ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 13, 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32,34, 38(ಎ) ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂ:1/2009-10 ದಿ:18-4-2009 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/2/2009-10 ದಿ:24-6-2009 ರ ವರದಿಯಲ್ಲಿ,ವಶಪಡಿಸಿಕೊಂಡ ಬಜಾಜ್ ಎಂ–80 ಸಂಖ್ಯೆ: ಕೆಎ–12–ಇ–5915 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪ್ರಾದೇಶಿಕ ಅಧಿಕಾರಿ, ಮಡಿಕೇರಿ, ಕೊಡಗು ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ವಾಹನದ ನೋಂದಣಿ ಮಾಲೀಕ ಎನ್.ಎ.ಪ್ರಕಾಶ್, ಬಿನ್:ಎನ್.ಎಲ್.ಆನಂದ, ನಿಡಿಂಜೆ ಮನೆ, ಬಳೆಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ ಆಗಿದ್ದು, ಇದರ ಚಾಸೀಸ್ ನಂ: 16ಸಿಬಿಡಿಎಂ 82210 ಮತ್ತು ಇಂಜಿನ್ ನಂ:16ಇಬಿಡಿಎಂ 87071 ಆಗಿದ್ದು, ಇದು ಬಜಾಜ್ ಎಂ–80 ವಾಹನ ಆಗಿರುತ್ತದೆಂದು ದೃಢೀಕರಣ ಪತ್ರ ನೀಡಿರುತ್ತಾರೆ. ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಂತೆ ವಾಹನದ ನೋಂದಣಿ ಮಾಲೀಕರಾದ ಶ್ರೀ.ಎನ್.ಎ. ಪ್ರಕಾಶ್ ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿ: 27-6-09 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ವಾಹನ ಮಾಲೀಕರು ನೀಡಿರುವ ಕಾರಣ ಕೇಳಿ ನೋಟಿಸಿಗೆ ಉತ್ತರವನ್ನು ಸಲ್ಲಿಸುತ್ತಾ, ತನ್ನ ವಾಹನವನ್ನು ತಾನು ಶ್ರೀ.ಎ.ನಾಗೇಶ್ ಟ್ರೈಲರ್, ಬಿನ್: ಮೋನಪ್ಪ ಗೌಡ, ಅಬೀರ ಮನೆ, ಬೈಲೆಗೂನಡ್ಕ ಅಂಚೆ, ಸಂಪಾಜೆ ಗ್ರಾಮ, ಸುಳ್ಯ ಇವರಿಗೆ ಹಸ್ತಾಂತರಿಸಿರುತ್ತೇನೆ ಎಂದು ತಿಳಿಸಿದ್ದು, ಯಾವುದೇ ಅಧಿಕೃತ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ.

ಅಬಕಾರಿ ನಿರೀಕ್ಷಕರು,ಸುಳ್ಯ ವಲಯ,ಸುಳ್ಯ ಇವರ ವರದಿ ಸಂ:ಸಿಆರ್‌ಎಂ/2/2009-10 ದಿ:1-8-2009 ರ ತನಿಖಾ ವರದಿಯಲ್ಲಿ, ವಾಹನದ ಈಗಿನ ಮೌಲ್ಯ ರೂ.2,000/- ಗಳಾಗಬಹುದೆಂದು ಮೋಟಾರು ವಾಹನ ನಿರೀಕ್ಷಕರು, ಮಂಗಳೂರು ಇವರಿಂದ ಮೌಲ್ಯಮಾಪನ ಪತ್ರ ಹಾಗೂ ತಕ್ಷೀರಿನಲ್ಲಿ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ತನ್ನ ಅಬಕಾರಿ ರಕ್ಷಕರ ಮೂಲಕ ಕಳುಹಿಸಲಾಗಿದ್ದು, ಅವರ ಪತ್ರ ಸಂಖ್ಯೆ:ಇ–208-1 ದಿ:10-6-2009 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.42.5 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ವಾಹನದ ಬಿಡುಗಡೆಗಾಗಿ ಓಡಿ ಹೋದ ಆರೋಪಿಗಳು ಹಾಗೂ ವಾಹನದ ಮಾಲೀಕರು ಅಧಿಕೃತ ದಾಖಲಾತಿಗಳೊಂದಿಗೆ ತನಿಖಾಧಿಕಾರಿಯವರ ಸುಳ್ಯ ವಲಯ ಕಚೇರಿಯಲ್ಲಿ ಹಾಜರಾಗಿ ಅಥವಾ ಈ ಪ್ರಾಧಿಕಾರದಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) **ಮೊದಲನೇ ವಿವಾದಾಂಶ:** ದಿ:18-4-2009 ರಂದು ಬಜಾಜ್ ಎಂ–80 ಮೋಟಾರು ಸಂಖ್ಯೆ: ಕೆಎ–12–ಇ–5915 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) **ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) **ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ.ಎಸ್.ತಮ್ಮ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ-1, ಮಂಗಳೂರು ಇವರು ದಿ:12-8-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಮಾರ್ಚ್-2009 ರಿಂದ ಜೂನ್-2009 ರ ತನಕ ಪ್ರಭಾರದಲ್ಲಿ ಸುಳ್ಯ ವಲಯ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿನಾಂಕ:18-4-2009 ರಂದು 10-45 ಗಂಟೆ ಸಮಯದಲ್ಲಿ ತನ್ನ ಸಿಬ್ಬಂದಿಯವರೊಂದಿಗೆ ಸುಳ್ಯ ತಾಲೂಕು ತೋಡಿಕಾನ ಗ್ರಾಮದ ಅರಂತೋಡ್‌ನಲ್ಲಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಒಂದು ಬಜಾಜ್ ಎಂ-80 ಅತೀ ವೇಗವಾಗಿ ಹೋಗುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಆತನು ನಿಲ್ಲಿಸದೆ ಮುಂದಕ್ಕೆ ಚಲಾಯಿಸಿಕೊಂಡು ಹೋದನು. ಸಂಶಯದ ಮೇರೆಗೆ ಸದರಿ ವಾಹನವನ್ನು ಬೆನ್ನಟ್ಟಿದಾಗ, ಸದರಿ ವಾಹನದಲ್ಲಿ ಇಬ್ಬರು ವ್ಯಕ್ತಿಗಳಿದ್ದು, ಅವರಲ್ಲಿ ಒಂದು ರಟ್ಟಿನ ಪೆಟ್ಟಿಗಳಿರುವುದು ಕಂಡು ಬಂತು. ಸದರಿ ವಾಹನವು ತೋಡಿಕಾನ ರಸ್ತೆಯ ಅಡ್ಯನಡ್ಕ ಎಂಬಲ್ಲಿ ಸದರಿ ವ್ಯಕ್ತಿಗಳು ವಾಹನ ಮತ್ತು ರಟ್ಟಿನ ಪೆಟ್ಟಿಗೆಯನ್ನು ರಸ್ತೆಯ ಬದಿಯಲ್ಲಿ ಬಿಟ್ಟು ಓಡಿ ಹೋಗಿ ತಲೆಮರೆಸಿಕೊಂಡಿರುತ್ತಾರೆ. ಆ ಸಮಯ ರಾತ್ರಿಯಾಗಿರುವುದರಿಂದ, ಸದರಿ ವ್ಯಕ್ತಿಗಳನ್ನು ಗುರುತು ಹಿಡಿಯಲು ಸಾಧ್ಯವಾಗಿರುವುದಿಲ್ಲ. ರಟ್ಟಿನ ಪೆಟ್ಟಿಗೆಯನ್ನು ಪರಿಶೀಲಿಸಿದಾಗ, ಒರಿಜಿನಲ್ ಚಾಯ್ಸ್ ಎಂಬ ವಿಸ್ಕಿಯ 180 ಎಂ.ಎಲ್.ನ 27 ಸೀಸೆಗಳಿರುವುದು ಕಂಡು ಬಂತು. ಸದರಿ ವಾಹನದ ಶೋಧನಾ ಕಾರ್ಯ ನಡೆಸಲು ಮಾನ್ಯ ನ್ಯಾಯಾಲಯದಿಂದ ಸಮೋಚಿತ ಆಧಾರ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಯಾರೂ ಸಾಕ್ಷಿದಾರರು ಸಿಗದ ಪ್ರಯುಕ್ತ ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿಯನ್ನಾಗಿರಿಸಿಕೊಂಡು ವಾಹನವನ್ನು ಪೂರ್ಣ ತಪಾಸಣೆ ನಡೆಸಿದಾಗ, ವಾಹನದ ನೋಂದಣಿ ಸಂಖ್ಯೆ: ಕೆಎ-12-ಇ-5915, ಇದು ಬಜಾಜ್ ಎಂ-80 ಆಗಿದ್ದು, ಮದ್ಯವನ್ನು ಸಾಗಾಟ ಮಾಡಲು ಯಾವುದೇ ದಾಖಲೆ ಪತ್ರಗಳು ದೊರೆತ್ತಿಲ್ಲದ ಕಾರಣ, ಇದು ಅಕ್ರಮ ಮದ್ಯವೆಂದು ಪರಿಗಣಿಸಿ ದೊರೆತ ಮದ್ಯದಿಂದ 180 ಎಂ.ಎಲ್.ನ ಒಂದು ಬಾಟ್ಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಬಟ್ಟೆದಾರ ಕಟ್ಟಿ, ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಮಹಜರನ್ನು ಸ್ಥಳದಲ್ಲಿಯೇ ಬರೆದು ಅದನ್ನು ನಿಶಾನೆ ಪಿ-1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-1ಎ ಎಂದು ಗುರುತಿಸಲಾಯಿತು. ನಂತರ ಕಚೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಲಾಯಿತು. ಅದನ್ನು ನಿಶಾನೆ ಪಿ-2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಯಿತು. ನಂತರ ತನಿಖೆಯನ್ನು ಮುಂದುವರಿಸಿ ಮದ್ಯದಿಂದ ತೆಗೆದ ಮಾದರಿಗಳನ್ನು ತನ್ನ ಅಬಕಾರಿ ರಕ್ಷಕರಾದ ಶ್ರೀ.ವಿಜಯ ಕುಮಾರ್ ಇವರ ಮುಖಾಂತರ ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ಅವರಿಂದ ದಿ:10-6-2009 ರಂದು ಪಡೆದಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಡಿಕೇರಿ, ಕೊಡಗು ಜಿಲ್ಲೆ ಇವರಿಂದ ಪಡೆದಿದ್ದು, ಸದರಿ ವರದಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ನಂತರ ಪ್ರಕರಣದ ತನಿಖೆಯ ಬಗ್ಗೆ ಶ್ರೀಮತಿ.ಗೀತಾ, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ ಇವರಿಗೆ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:18-4-2009 ರಂದು ಜಪ್ತುಪಡಿಸಿಕೊಂಡಿರುವ ಬಜಾಜ್ ಎಂ-80 ಮೋಟಾರು ಸೈಕಲ್ ಸಂಖ್ಯೆ: ಕೆಎ-12-ಇ-5915 ರಲ್ಲಿ ಅಕ್ರಮವಾಗಿ 4-860 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ

ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಎಂ–80 ಮೋಟಾರು ಸೈಕಲ್ ಸಂಖ್ಯೆ: ಕೆಎ–12–ಇ–5915ನ್ನು ವಶಪಡಿಸಿಕೊಂಡು ಸುಮಾರು 5 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಸುಳ್ಯ ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಹಾಗೂ ಆರೋಪಿಗಳು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಪ್ರಾಧಿಕಾರದಿಂದ ವಾಹನದ ನೋಂದಣಿ ಮಾಲೀಕರಿಗೆ ನೀಡಿದ ಕಾರಣ ಕೇಳಿ ನೋಟೀಸಿಗೆ ಅನುಗುಣವಾಗಿ ತನ್ನ ವಾಹನವನ್ನು ಶ್ರೀ.ಎ.ನಾಗೇಶ್ ಟೈಲರ್, ಬಿನ್: ಮೋನಪ್ಪ ಗೌಡ, ಅಬೀರ ಮನೆ, ಬೈಲೆಗೂನಡ್ಕ ಅಂಚೆ, ಸಂಪಾಜೆ ಗ್ರಾಮ, ಸುಳ್ಯ ದಿ:1-6-2000 ರಂದು ಹಸ್ತಾಂತರಿಸಿರುತ್ತೇನೆ ಎಂದು ತಿಳಿಸಿರುತ್ತಾರೆ. ಆದರೆ ಅಧಿಕೃತ ದಾಖಲಾತಿಗಳು ಹಾಜರುಪಡಿಸಿರುವುದಿಲ್ಲ. ಆದುದರಿಂದ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ದಸ್ತಗಿರಿಯಾದ ಆರೋಪಿಗಳು ಪರಾರಿಯಾಗಿದ್ದು, ಇದುವರೆಗೂ ಪತ್ತೆಯಾಗದ ಕಾರಣ ವಾಹನದಲ್ಲಿ ಮದ್ಯ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವು ಈಗಾಗಲೇ 5 ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಸರಕಾರದ ಆರ್ಥಿಕ ಹಿತದೃಷ್ಟಿಯಿಂದ ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಎಂ–80 ಮೋಟಾರು ಸೈಕಲ್ ಸಂಖ್ಯೆ: ಕೆಎ–12–ಇ–5915 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/352/ಡಿಟಿಸಿಆರ್/2008–09, ದಿನಾಂಕ:21ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ತಕ್ಷೀರು ಸಂ: 1/2009-10 ದಿ:18-4-2009 ರಲ್ಲಿ ಜಪ್ತುಪಡಿಸಿಕೊಂಡಿರುವ 4-860 ಲೀಟರ್ ಮದ್ಯದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮದ್ಯವನ್ನು ಹೊರತುಪಡಿಸಿ, ಉಳಿದ 4-680 ಲೀಟರ್ ಮದ್ಯವನ್ನು ಹಾಗೂ ಅಕ್ರಮ ಸಾಗಾಟಕ್ಕೆ ಬಳಸಿದ ಬಜಾಜ್ ಎಂ–80 ಮೋಟಾರು ಸೈಕಲ್ ಸಂಖ್ಯೆ: ಕೆಎ–12–ಇ–5915 ನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಇಎಸ್/ 2007 ದಿ:13-7-2007 ರಂತೆ ಮಾರಾಟ ಮಾಡಲು ನಿಷೇಧಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ಸದ್ರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43ಎ(3) ರ ಅನ್ವಯ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರುರವರ ಸುತ್ತೋಲೆ ಸಂಖ್ಯೆ: ಇಸಿಸಿ/73/ಸಿಆರ್‌ಎಂ/2004 ದಿ:12-9-2005 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ, ಮದ್ಯವನ್ನು ಬಾಟ್ಲಿಗಳ ಸಮೇತ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:21-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.
ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ–1: ಶ್ರೀ.ಎಸ್.ತಮ್ಮ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು.

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ–1 : ಮಹಜರು.
ನಿಶಾನೆ ಪಿ–1ಎ : ಮಹಜರಿನಲ್ಲಿ ಫಿರ್ಯಾದುದಾರರ ಸಹಿ
ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–2ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ
ನಿಶಾನೆ ಪಿ–3 : ರಾಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–4 : ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.904

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/182/ಡಿಟಿಸಿಆರ್/2008–09 ದಿನಾಂಕ:20ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಉಪ್ಪಿನಂಗಡಿ ಪೊಲೀಸ್ ಠಾಣೆ, ಉಪ್ಪಿನಂಗಡಿ.

**ಆರೋಪಿಗಳು:**
1 ನವಾಜ್ ಪಿರಾನ್, ಬಿನ್: ಗೌಸ್ ಪಿರ್(58 ವ), ವಾಸ:4443 1 ನೇ ಹಂತ, ಎರಡನೇ ಮುಖ್ಯ ರಸ್ತೆ, ಬಿ.ಬಿ.ಎಂ.ಲೇಔಟ್, ಬೆಂಗಳೂರು–29.
2 ಅಜೇಯ್.ವಿ.ಎ, ಬಿನ್:ಅಶೋಕನ್(30 ವ), ವಾಸ:ಪೆರಿಗಾಂನ್ ತಾಲ್ಲೂಕು, ತ್ರಿಶೂರು, ಕೊಡಗಲೂರು ತಾಲ್ಲೂಕು, ಕೇರಳ
3 ಗಿರೀಶ್.ಟಿ.ಸಿ, ಬಿನ್:ಚಂದ್ರನ್.ಟಿ.ವಿ(32 ವ), ತೋಡಪುರ ತಾಲ್ಲೂಕು, ಶಾರಿಗೋಡು ವಿಲೇಜ್, ಇಡಕ್ಕಿ ಜಿಲ್ಲೆ, ಕೇರಳ.
4 ಜಾವೇದ್ ಖಾನ್, ಬಿನ್:ಶರೀಫ್ ಖಾನ್, ಚಾಮಂಡ ವಿಲೇಜ್, ಕಸರವಾಡ್ ತಾಲ್ಲೂಕು, ಮಧ್ಯಪ್ರದೇಶ.
5 ತಬರೇಶ್ ಯಾನೆ ತಬ್ಬು, ಬಿನ್:ಬಬ್ಬು ಖಾನ್, ಚಾಮಂಡ ವಿಲೇಜ್, ಕಸರವಾಡ್ ತಾಲ್ಲೂಕು, ಮಧ್ಯಪ್ರದೇಶ.

**ವಾಹನ ಮಾಲೀಕರು:**
ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:2-12-2008 ರಂದು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧದಳದ ಪೊಲೀಸ್ ಅಧೀಕ್ಷಕರು ಹಾಗೂ ಕೇಂದ್ರ ವಲಯದ ಪೊಲೀಸ್ ಅಧೀಕ್ಷಕರ ನೇತೃತ್ವದಲ್ಲಿ ಮತ್ತು ತಮ್ಮ ಸಿಬ್ಬಂದಿಯವರೊಂದಿಗೆ ಪುತ್ತೂರು ತಾಲೂಕು ಉಪ್ಪಿನಂಗಡಿ ಪೊಲೀಸ್ ಠಾಣೆಯ ಸರಹದ್ದಿನ ಇಚ್ಲಂಪಾಡಿ ಹಾಗೂ ಕೋರವೇರು ಗ್ರಾಮದ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಗಸ್ತು ತಿರುಗುತ್ತಿರುವಾಗ ಬೆಳಗ್ಗಿನ ಜಾವ ಸುಮಾರು 6-00 ಗಂಟೆ ಸಮಯದಲ್ಲಿ ಒಂದು ಲಾರಿ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಚಾಲಕ ಲಾರಿಯನ್ನು ನಿಲ್ಲಿಸಿ, ಅದರಲ್ಲಿರುವ ವ್ಯಕ್ತಿಗಳು ಓಡಲಾರಂಭಿಸಿದರು. ಸಿಬ್ಬಂದಿಯವರ ಸಹಾಯದಿಂದ ಸದರಿ ಓಡಲಾರಂಭಿಸಿದ ವ್ಯಕ್ತಿಗಳಲ್ಲಿ 4 ಮಂದಿಯನ್ನು ಹಿಡಿದು ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ, ಮೇಲಿನ ಕ್ರಮ ಸಂಖ್ಯೆ:1 ರಿಂದ 5 ರವರೆಗೆ ತಿಳಿಸಿದ ವಿಳಾಸಗಳ ಮಾಹಿತಿಗಳನ್ನು ತಿಳಿಸಿರುತ್ತಾರೆ. ನಂತರ ಲಾರಿಯನ್ನು ಪರಿಶೀಲಿಸಲಾಗಿ, ಲಾರಿಯ ನೋಂದಣಿ ಸಂಖ್ಯೆ: ಕೆಎ–19–ಎ–3257 ಆಗಿದ್ದು, ಇದರ ಮೇಲೆ ಪಬ್ಲಿಕ್ ಕ್ಯಾರಿಯರ್ ಎಂಬ ನಾಮಫಲಕವಿದ್ದು, ಟಾಟಾ ಕಂಪೆನಿಯ ಲಾರಿಯಾಗಿರುತ್ತದೆ. ಲಾರಿಯ ಮೇಲ್ಭಾಗಕ್ಕೆ ಪ್ಲಾಸ್ಟಿಕ್ ಟರ್ಪಾಲನ್ನು ಹಾಕಿದ್ದು, ಅದರಲ್ಲಿ ಎರಡು ಅಡಿಯಷ್ಟು ಮಣ್ಣನ್ನು ತೆಗೆದು ನೋಡಲಾಗಿದ್ದು, ಅದರ ಕೆಳಗೆ ಫ್ಲೈವುಡ್ ಶೀಟ್‌ಗಳ ಹಲಗೆಯ ಪೀಸ್‌ಗಳಿದ್ದು, ಅಲ್ಲಲ್ಲಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಮದ್ಯಸಾರ ತುಂಬಿರುವುದು ಕಂಡು ಬಂತು. ಪ್ಲಾಸ್ಟಿಕ್ ಕ್ಯಾನುಗಳನ್ನು ಎಣಿಸಿದಾಗ, 35 ಲೀಟರ್ ಸಾಮರ್ಥ್ಯದ 240 ಕ್ಯಾನುಗಳಲ್ಲಿ ಮದ್ಯಸಾರವಿರುವುದು ಕಂಡು ಬಂತು. ಆರೋಪಿಯಾದ ಜಿ.ನವಾಜ್ ಪಿರಾನ್ ಎಂಬವನನ್ನು ವಿಚಾರಣೆ ಮಾಡಲಾಗಿ, ಆತನು ಹುಬ್ಬಳ್ಳಿ ಜಿಲ್ಲೆಯ ಲೋಕೇಶ್ ಹಾಗೂ ಬೇಲೂರು ಹೊಸ ಪೇಟೆಯ ನಾಗರಾಜ ಇವರುಗಳಿಂದ ಮದ್ಯಸಾರ ಖರೀದಿ ಮಾಡಿಕೊಂಡು ಕೇರಳ ರಾಜ್ಯದ ವಿಜಯ.ವಿ.ಎ ಹಾಗೂ ಗಿರೀಶ್‌ರವರ ಮುಖಾಂತರ ಅಕ್ರಮವಾಗಿ ನಕಲಿ ಮದ್ಯ ತಯಾರು ಮಾಡಿ, ಮಂಗಳೂರು ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ಮಾರಾಟ ಮಾಡುತ್ತಿರುವುದು ಎಂದು ತಿಳಿಸಿ ಹಾಗೂ ಸದರಿ ಸರಕನ್ನು ಎಲ್ಲಿಂದ ತೆಗೆದುಕೊಂಡು ಬಂದಿರುತ್ತೀರಿ ಎಂದು ವಿಚಾರಿಸಿದಾಗ, ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಜಮಖಂಡಿ ಶುಗರ್ ಕಂಪೆನಿಯಿಂದ ತೆಗೆದುಕೊಂಡು ಬಂದಿರುವುದಾಗಿ, ಅಲ್ಲಿ ಕೆಲಸ ಮಾಡುವ ಮೈಲಾರಿ ಎಂಬವವರು ಕಾರ್ಖಾನೆಯಿಂದ ತನಗೆ ಕೊಟ್ಟಿರುತ್ತಾರೆಂದು ತಿಳಿಸಿದನು. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32,34,43 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುತ್ತದೆಂದು ಆರೋಪಿಗಳಿಗೆ ತಿಳಿಸಿ, ಸದರಿ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು, ಅದಕ್ಕೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಆರೋಪಿಗಳ ಗುರುತಿನ ಚೀಟಿಯನ್ನು ಅಂಟಿಸಿ ಮಾದರಿ ಸೀಲನ್ನು ಸ್ಥಳದಲ್ಲಿಯೇ ತಯಾರಿಸಿರುತ್ತಾರೆ. ನಂತರ ಸದರಿ ಲಾರಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಅದರಲ್ಲಿ ಎರಡು ನಂಬರು ಪ್ಲೇಟ್‌ಗಳಿದ್ದು, ಅದರ ಮೇಲೆ ಕೆಎ–12–ಬಿ–5936 ಹಾಗೂ ಆರ್.ಸಿ. ಪುಸ್ತಕ ದೊರೆತ್ತಿದ್ದು, ಅದರ ನೋಂದಣಿ ಸಂಖ್ಯೆ: ಕೆಎ–19–ಎ–3257 ಆಗಿರುತ್ತದೆ. ಮಾಲಿಕರ ಹೆಸರು ರಾಮನಾಥ ಪೂಜಾರಿ, ಬಿನ್:ಪ್ರದೀಪ್ ಪೂಜಾರಿ, ನಂ.73/ಎ ಕಾಲನಿ, ಹರೀಶ್ ನಗರ ಮೈನ್ ರೋಡ್, ಮಂಗಳೂರು ಎಂದು ಬರೆದಿರುತ್ತದೆ. ಮಹಜರನ್ನು ಸ್ಥಳದಲ್ಲಿಯೇ ಬರೆದು ಸ್ಥಳ ಚೆಕ್‌ಬಂದಿಯನ್ನು ಮಹಜರಿನಲ್ಲಿ ನಮೂದಿಸಿರುತ್ತಾರೆ. ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಅಕ್ರಮವಾಗಿ ಹೊಂದಿದ್ದ ಮದ್ಯಸಾರ ಹಾಗೂ ಸಾಗಾಟಕ್ಕೆ ಬಳಸಿದ ಲಾರಿಯನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಆರೋಪಿಗಳ ವಿರುದ್ಧ ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ, ಪುತ್ತೂರು ಗ್ರಾಮಾಂತರ, ಪುತ್ತೂರು ಇವರು ತಕ್ಷೀರು ಸಂಖ್ಯೆ: 215/2008 ದಿ:2-12-2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಹಾಗೂ ದಾಖಲಾತಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಸದರಿ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಹಸ್ತಾಂತರಿಸಲು ದಿ:16-12-2008 ರಂದು ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ ಇವರು ಈ ಪ್ರಾಧಿಕಾರಕ್ಕೆ ಪತ್ರ ಬರೆಯಲಾಗಿದ್ದು, ಸದರಿ ಪತ್ರದಂತೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/182/ಡಿಟಿಸಿಆರ್/2008-09 ದಿ:26-12-2008 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಪತ್ರ ಸಂಖ್ಯೆ: ಆರ್‌ಸಿಆರ್/ 45 /2008-09 ದಿ:12-02-2009 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಈ ಕೆಳಗಿನ ಸೊತ್ತುಗಳನ್ನು ದಿ:11-02-2009 ರಂದು ಸ್ವೀಕರಿಸಿರುತ್ತಾರೆ.

1) ಲಾರಿ ಸಂಖ್ಯೆ: ಕೆಎ–19–ಎ–3257 ಮತ್ತು ನಕಲಿ ಸಂಖ್ಯೆ: ಕೆಎ–12–ಬಿ–5936 ಎಂದು ಬರೆದಿರುವ ನಂಬರು ಪ್ಲೇಟ್‌ಗಳು–2.
2) ಫ್ಲೈವುಡ್ ಶೀಟ್‌ಗಳು–3
3) 35 ಲೀಟರ್‌ನ 150 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 35 ಲೀಟರ್‌ನಂತೆ – 5425-000 ಲೀ. ಮದ್ಯಸಾರ.
4) 35 ಲೀಟರ್‌ನ 4 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 30 ಲೀಟರ್‌ನಂತೆ – 120 ಲೀ. ಮದ್ಯಸಾರ.
5) 35 ಲೀಟರ್‌ನ 3 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 25 ಲೀಟರ್‌ನಂತೆ : 75-000 ಲೀ. ಮದ್ಯಸಾರ.

6) 35 ಲೀಟರ್‌ನ 1 ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 10 ಲೀಟರ್‌ನಂತೆ : 10-000 ಲೀ. ಮದ್ಯಸಾರ.
7) 35 ಲೀಟರ್‌ನ 1 ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 15 ಲೀಟರ್‌ನಂತೆ : 15-000 ಲೀ. ಮದ್ಯಸಾರ.
8) 35 ಲೀಟರ್‌ನ 76 ಒಡೆದು ಹೋದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ: ಆರ್‌ಸಿಆರ್/45/2008-09 ದಿ:13-5-2009 ರ ತನಿಖಾ ವರದಿಯಲ್ಲಿ, ಸಹಾಯಕ ಪೊಲೀಸ್ ಅಧೀಕ್ಷಕರು ಪುತ್ತೂರು ಉಪ ವಿಭಾಗ, ಪುತ್ತೂರು ಇವರು ಸಲ್ಲಿಸಿದ ಕೆಮಿಕಲ್ ವರದಿ ಸಂಖ್ಯೆ: ಇ-585-2 ದಿ: 13-1-2009 ರ ವರದಿಯಲ್ಲಿ ಮದ್ಯಸಾರದ ಪ್ರಮಾಣದ ಶೇ.95 ಇರುವುದಾಗಿ, ತಕ್ಷೀರಿನಲ್ಲಿ ಈ ಮೇಲಿನ ಹಸ್ತಾಂತರಗೊಂಡ ಮದ್ಯಸಾರ ಹಾಗೂ ಫ್ಲೈವುಡ್ ಶೀಟ್ ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿಯನ್ನು ಆಧರಿಸಿ, ಈಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/182/ಡಿಟಿಸಿಆರ್ /2008-09 ದಿ:21-5-2009 ರ ಆದೇಶದಲ್ಲಿ ಈ ಕೆಳಕಂಡ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ.

| | |
|---|---|
| 1. | 35 ಲೀಟರ್ ಗಾತ್ರದ 150 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 5425-000 ಲೀಟರ್ ಮದ್ಯಸಾರ. |
| 2. | 35 ಲೀಟರ್ ಗಾತ್ರದ 4 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 30 ಲೀಟರ್‌ನಂತೆ ಒಟ್ಟು 120-000 ಲೀಟರ್ ಮದ್ಯಸಾರ. |
| 3. | 35 ಲೀಟರ್ ಗಾತ್ರದ 3 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 25 ಲೀಟರ್ ನಂತೆ ಒಟ್ಟು 75-000 ಲೀಟರ್ ಮದ್ಯಸಾರ. |
| 4. | 35 ಲೀಟರ್ ಗಾತ್ರದ 1 ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 10 ಲೀಟರ್ ಮದ್ಯಸಾರ. |
| 5. | 35 ಲೀಟರ್ ಗಾತ್ರದ 1 ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 15 ಲೀಟರ್ ಮದ್ಯಸಾರ. |
| | **ಒಟ್ಟು – 5645-000 ಲೀಟರ್ ಮದ್ಯಸಾರ.** |
| 6. | 35 ಲೀಟರ್ ಗಾತ್ರದ ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು–76. |
| 7. | ಫ್ಲೈವುಡ್ ಶೀಟ್‌ಗಳು–3. |

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಇಎಸ್/2007 ದಿ:13–7–2007 ರಂತೆ ಮಾರಾಟ ಮಾಡಲು ನಿಷೇಧಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸುವಂತೆ ಆದೇಶವಿರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43(ಎ)3 ರ ಅನ್ವಯ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರ ಸಮಕ್ಷಮ ಮತ್ತು ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ ಹಾಗೂ ವ್ಯವಸ್ಥಾಪಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಪುತ್ತೂರು ಇವರನ್ನು ಮತ್ತು ಸ್ಥಳೀಯ ಸಾರ್ವಜನಿಕರು ಹಾಗೂ ಮಾಧ್ಯಮ ಪತ್ರಿಕಾ ವರದಿಗಾರರನ್ನು ಸೇರಿಸಿ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ:ಇಸಿಸಿ/73/ಸಿಆರ್‌ಎಂ/2004 ದಿ:12–9–05 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ಮದ್ಯಸಾರವನ್ನು ನಾಶಪಡಿಸಲು ಆದೇಶಿಸಿದೆ ಹಾಗೂ ಉಳಿದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಹಾಗೂ ಫ್ಲೈವುಡ್ ಶೀಟ್ ಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಆದೇಶಿಸಿದೆ.

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಈ ಪ್ರಾಧಿಕಾರದ ಆದೇಶಾನುಸಾರ ನಾಶಪಡಿಸಲಾಗಿದ್ದು, ಉಳಿದ ಪ್ಲಾಸ್ಟಿಕ್ ಕ್ಯಾನ್ ಹಾಗೂ ಫ್ಲೈವುಡ್ ಶೀಟ್‌ಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಿ, ಅದರಲ್ಲಿ ಬಂದ ಒಟ್ಟು ರೂ.4,500/– ನ್ನು ಸರಕಾರಕ್ಕೆ ಪಾವತಿಸಿ ವರದಿಯನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ದಿ:3–6–2009 ರಂದು ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂ: ಆರ್‌ಸಿಆರ್/45/2008-09 ದಿ:15-6-2009 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ–19–ಎ–3257 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಸಾರಿಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ಪಡೆಯಲಾಗಿದ್ದು, ಸದರಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ನೋಂದಣಿ ಸಂಖ್ಯೆ: ಕೆಎ–19–ಎ–3257 ಇದರ ಚಾಸೀಸ್ ನಂ:ಟಿ–55011282ಜೆ99 ಹಾಗೂ ಇಂಜಿನ್ ನಂ: ಡಿ010024647 ಆಗಿದ್ದು, ಇದು ಟೆಂಪೋ ಟ್ರ್ಯಾಕ್ಸ್ ವಾಹನವಾಗಿರುತ್ತದೆ. ಆದರೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವು ಟಾಟಾ ಕಂಪೆನಿಯ ವಾಹನವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯ ಇಂಜಿನ್ ನಂಬರ್ ಹಾಗೂ ಚಾಸೀಸ್ ನಂಬರ್ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ನಮೂದಿಸಿದ ಇಂಜಿನ್ ನಂಬರ್ ಹಾಗೂ ಚಾಸೀಸ್

ನಂಬರ್ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಆದುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ನೋಂದಣಿ ಸಂಖ್ಯೆ ನಕಲಿಯಾಗಿರುತ್ತದೆಂದು ದೃಢೀಕರಿಸಿರುತ್ತಾರೆ. ಲಾರಿಯಲ್ಲಿ ಸಿಕ್ಕಿದ ಇನ್ನೊಂದು ನಂಬರ್ ಪ್ಲೇಟ್‌ನ ನೋಂದಣಿ ಸಂ: ಕೆಎ–12–ಬಿ–5936 ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆಯಲಾಗಿದ್ದು, ಅವರ ಪತ್ರ ಸಂಖ್ಯೆ: ಕೆಎ–12–ಬಿ–5936/2009-10 ದಿ:29-5-2009 ರ ವರದಿಯಲ್ಲಿ, ಅವರ ಕಚೇರಿಯಲ್ಲಿ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ 2 ನೇ ನೋಂದಣಿ ಸಂಖ್ಯೆ: ಕೆಎ–12–ಬಿ–5936 ನೋಂದಣಿ ಆಗಿರುವುದಿಲ್ಲವೆಂದು, ಈ ಬಗ್ಗೆ ವಾಹನದ ವಿವರಗಳನ್ನು ಕಳುಹಿಸಿಕೊಡಲು ಸಾಧ್ಯವಾಗಿರುವುದಿಲ್ಲವೆಂದು ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ಈಗಾಗಲೇ ವಶಪಡಿಸಿಕೊಂಡು ಈಗಾಗಲೇ 8 ತಿಂಗಳು ಕಳೆದರೂ, ಉಪ್ಪಿನಂಗಡಿ ಪೊಲೀಸ್ ಠಾಣೆ ಹಾಗೂ ಪುತ್ತೂರು ವಲಯ ಕಚೇರಿಯಲ್ಲಿ ದಸ್ತಗಿರಿಯಾದ ಆರೋಪಿಗಳು, ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ವಾಹನದ ಬಿಡುಗಡೆಗಾಗಿ ಯಾರೂ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಸದರಿ ವಾಹನದಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯಸಾರವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) **ಮೊದಲನೇ ವಿವಾದಾಂಶ:** ದಿ:2-12-2008 ರಂದು ಲಾರಿಯ ನಕಲಿ ಸಂಖ್ಯೆ: ಕೆಎ–19–ಎ–3257 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) **ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) **ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರು ದಿ:12-8-09 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು 2005 ರಿಂದ ಇಲ್ಲಿಯವರೆಗೆ ಅಬಕಾರಿ ನಿರೀಕ್ಷಕರಾಗಿ ಪುತ್ತೂರು ವಲಯ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಕ್ಷೀರಿಗೆ ಸಂಬಂಧಿಸಿದ ಈ ಕೆಳಕಂಡ ಸೊತ್ತುಗಳನ್ನು ಉಪ್ಪಿನಂಗಡಿ ಪೊಲೀಸ್ ಠಾಣೆಯ ಕಾನ್ಸ್‌ಟೇಬಲ್ 629 ಶ್ರೀ.ದೇವದಾಸ್‌ನಿಂದ ದಿ:11-2-2009 ರಂದು ಸ್ವೀಕರಿಸಿದ್ದು, ಸ್ವೀಕೃತಿಯನ್ನು ನೀಡಿರುತ್ತೇನೆ.

**ಹಸ್ತಾಂತರಗೊಂಡ ಸೊತ್ತುಗಳು:**

1) ಲಾರಿ ಸಂಖ್ಯೆ: ಕೆಎ–19–ಎ–3257 ಮತ್ತು ನಕಲಿ ಸಂಖ್ಯೆ: ಕೆಎ–12–ಬಿ–5936 ಎಂದು ಬರೆದಿರುವ ನಂಬರು ಪ್ಲೇಟ್‌ಗಳು–2.
2) ಪ್ಲೈವುಡ್ ಶೀಟ್‌ಗಳು–3
3) 35 ಲೀಟರ್‌ನ 150 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 35 ಲೀಟರ್‌ನಂತೆ – 5425-000 ಲೀ. ಮದ್ಯಸಾರ.
4) 35 ಲೀಟರ್‌ನ 4 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 30 ಲೀಟರ್‌ನಂತೆ –120 ಲೀ. ಮದ್ಯಸಾರ.
5) 35 ಲೀಟರ್‌ನ 3 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 25 ಲೀಟರ್‌ನಂತೆ :75-000 ಲೀ. ಮದ್ಯಸಾರ.
6) 35 ಲೀಟರ್‌ನ 1 ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 10 ಲೀಟರ್‌ನಂತೆ : 10-000 ಲೀ. ಮದ್ಯಸಾರ.
7) 35 ಲೀಟರ್‌ನ 1 ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 15 ಲೀಟರ್‌ನಂತೆ : 15-000 ಲೀ. ಮದ್ಯಸಾರ.
8) 35 ಲೀಟರ್‌ನ 76 ಒಡೆದು ಹೋದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು.

ತಕ್ಷೀರಿಗೆ ಸಂಬಂಧಿಸಿದ ಮದ್ಯಸಾರದ ಮಾದರಿಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ಸಲ್ಲಿಸಿದ ಕೆಮಿಕಲ್ ವರದಿ ಸಂಖ್ಯೆ: ಇ–585-2 ದಿ:13-1-2009 ರ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ತಕ್ಷೀರಿನಲ್ಲಿ ಮದ್ಯಸಾರ ಹಾಗೂ ಪ್ಲೈವುಡ್ ಶೀಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು

ಹಾಕಿಕೊಂಡು ವಿಲೇವಾರಿಗೊಳಿಸಲು ತನಿಖಾ ವರದಿಯನ್ನು ದಿ:13-5-2009 ರಂದು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು. ನಂತರ ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯ ನಕಲಿ ನೋಂದಣಿ ಸಂಖ್ಯೆ: ಕೆಎ–19–ಎ–3257 ಮತ್ತು ಕೆಎ–19–ಬಿ–5936 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ತರಿಸಲು ಸಂಬಂಧಪಟ್ಟ ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಲಾಗಿ, ಅದರಂತೆ ಕೆಎ–19–ಎ–3257 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ವಾಹನ ಟೆಂಪೊ ಟ್ರ್ಯಾಕ್ಸ್ ಆಗಿದ್ದು, ಇದರ ಚಾಸೀಸ್ ನಂಬರ್ ನಂ:ಟಿ–55011282ಜೆ99 ಹಾಗೂ ಇಂಜಿನ್ ನಂ: ಡಿ010024647 ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಕ್ಕೆ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಇನ್ನೊಂದು ನೋಂದಣಿ ಸಂಖ್ಯೆ: ಕೆಎ–12–ಬಿ–5936 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ತರಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಡಿಕೇರಿ ಇವರನ್ನು ಸಂಪರ್ಕಿಸಲಾಗಿ, ಅವರ ಪತ್ರ ಸಂಖ್ಯೆ ದಿ:29-5-2009 ರ ವರದಿಯಲ್ಲಿ ಸದರಿ ನೋಂದಣಿ ಸಂಖ್ಯೆ ಅವರ ಪ್ರಾಧಿಕಾರದಲ್ಲಿ ನೋಂದಣಿ ಆಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಸದರಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಕ್ರಮವಾಗಿ ನಿಶಾನೆ ಪಿ–2 ಮತ್ತು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ವಾಹನದ ಬಿಡುಗಡೆಗಾಗಿ ಹಾಗೂ ಅವರ ಪರ ಯಾರೂ ವಕೀಲರು ಹಾಜರಾಗಿರುವುದಿಲ್ಲ ಹಾಗೂ ಅಕ್ರಮ ಮದ್ಯಸಾರ ಆಗಿರುವುದರಿಂದ, ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾ ವರದಿಯನ್ನು ದಿನಾಂಕ:15-6-2009 ರಂದು ಸಲ್ಲಿಸಲಾಗಿದ್ದು, ಸದರಿ ವರದಿಯನ್ನು ನಿಶಾನೆ ಪಿ–4 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ, ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:2-12-2008 ರಂದು ಜಪ್ತುಪಡಿಸಿಕೊಂಡಿರುವ ಲಾರಿಯ ನಕಲಿ ಸಂಖ್ಯೆ: ಕೆಎ–19–ಎ–3257 ರಲ್ಲಿ ಅಕ್ರಮವಾಗಿ 8400 ಲೀಟರ್ ಮದ್ಯಸಾರ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ, ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ನಿರೀಕ್ಷಕರು, ಅಬಕಾರಿ ಲಾಟರಿ ಮತ್ತು ನಿಷೇಧದಳ ಇವರು ದಾಖಲಿಸಿದ ಪ್ರಕರಣವನ್ನು ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರು ದಾಖಲಿಸಿದ ತಕ್ಷೀರು ಸಂಖ್ಯೆ: 215/2008 ದಿ:2-12-2008 ರ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ಮದ್ಯಸಾರ ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಪೊಲೀಸ್ ಅಧೀಕ್ಷಕರು,ಅಬಕಾರಿ ಲಾಟರಿ ಮತ್ತು ನಿಷೇಧದಳ ಮತ್ತು ಸಿಬ್ಬಂದಿಯವರು ದಾಖಲಿಸಿದ ಮಹಜರಿನಲ್ಲಿ ನಮೂದಿಸಿದಂತೆ ಆರೋಪಿಗಳ ಹೇಳಿಕೆಗಳಲ್ಲಿ, ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯಸಾರವನ್ನು ಕಾಳಸಂತೆಯಲ್ಲಿ ಖರೀದಿಸಿ ಮಾರಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಟ ಮಾಡಿರುವುದನ್ನು ರುಜುವಾತುಪಡಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯ ನಕಲಿ ಸಂಖ್ಯೆ: ಕೆಎ–19–ಎ–3257ನ್ನು ವಶಪಡಿಸಿಕೊಂಡು ಸುಮಾರು 8 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಉಪ್ಪಿನಂಗಡಿ ಪೊಲೀಸ್ ಠಾಣೆ ಮತ್ತು ಪುತ್ತೂರು ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ

ಮಾಲೀಕರು ಹಾಗೂ ಆರೋಪಿಗಳು ಕೂಡಾ ವಾಹನವು ತನ್ನದೆಂದು ಬಿಡುಗಡೆಗೆ ಅರ್ಜಿ ಸಲ್ಲಿಸಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ನೋಂದಣಿ ಸಂಖ್ಯೆ ನಕಲಿಯಾಗಿರುವುದು ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ವರದಿಯಂತೆ ಆರೋಪಿಗಳು ಸದರಿ ಲಾರಿಯಲ್ಲಿ ನಕಲಿ ನಂಬರುಗಳನ್ನು ಅಳವಡಿಸಿ ಅಕ್ರಮವಾಗಿ ಮದ್ಯಸಾರವನ್ನು ಯಾವುದೇ ರಹದಾರಿ ಪತ್ರವಿಲ್ಲದೆ ಸಾಗಾಟಕ್ಕೆ ವಾಹನವನ್ನು ಬಳಸಿರುವುದು ಸಾಬೀತಾಗಿರುತ್ತದೆ. ಆದುದರಿಂದ ವಾಹನದ ಮಾಲೀಕರು ಅಕ್ರಮ ಮದ್ಯಸಾರ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ನಕಲಿ ನಂಬರ್ ಅಳವಡಿಸಿ ಮದ್ಯಸಾರ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ದಸ್ತಗಿರಿಯಾದ ಆರೋಪಿಗಳು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದುದರಿಂದ ವಾಹನ ಮಾಲೀಕರೇ ಸ್ವತ: ತನ್ನ ಲಾರಿಯಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯಸಾರ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯು ಈಗಾಗಲೇ 8 ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಸರಕಾರದ ಆರ್ಥಿಕ ಹಿತದೃಷ್ಟಿಯಿಂದ ಅಕ್ರಮ ಮದ್ಯಸಾರ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/182/ಡಿಟಿಸಿಆರ್/2008–09 ದಿನಾಂಕ:20ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ನಿರೀಕ್ಷಕರು, ಅಬಕಾರಿ ಲಾಟರಿ ಮತ್ತು ನಿಷೇಧದಳ ಇವರು ಪತ್ತೆ ಮಾಡಿರುವ ಪ್ರಕರಣಕ್ಕೆ ಸಂಬಂಧಿಸಿ ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರು ದಾಖಲಿಸಿದ ತಕ್ಷೀರು ಸಂ:215/2008 ದಿ:2-12-2008 ರಲ್ಲಿ ಜಪ್ತುಪಡಿಸಿಕೊಂಡಿರುವ ಟಾಟಾ ಲಾರಿಯನ್ನು (ನಕಲಿ ಸಂಖ್ಯೆ: ಕೆಎ–19–ಎ–3257) ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ–1: ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ–1 : ಪ್ರಥಮ ತನಿಖಾ ವರದಿ.
ನಿಶಾನೆ ಪಿ–1ಎ : ತನಿಖಾ ವರದಿಯಲ್ಲಿ ತನಿಖಾಧಿಕಾರಿಯವರ ಸಹಿ
ನಿಶಾನೆ ಪಿ–2 : ಕೆಎ–19–ಎ–3257 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–3 : ಕೆಎ–12–ಬಿ–5936 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–4 : ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆ.
ನಿಶಾನೆ ಪಿ–4ಎ : ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಲ್ಲಿ ತನಿಖಾಧಿಕಾರಿಯವರ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್.916 ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/227/ಡಿಟಿಸಿಆರ್/2008–09 ದಿನಾಂಕ:17ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು(ನಂ.1),
ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ಆರೋಪಿಗಳು:**
ಯಶೋಧರ, ಬಿನ್:ಲಕ್ಷ್ಮಣ(36 ವ),
ಕಲ್ಲುಗುಡ್ಡೆ ಮನೆ, ಮೇಲಂತಬೆಟ್ಟು ಗ್ರಾಮ ಮತ್ತು ಪೋಸ್ಟ್,
ಬೆಳ್ತಂಗಡಿ.

**ವಾಹನ ಮಾಲೀಕರು:**
ಯುನೈಟೆಡ್ ಮೋಟಾರ್ಸ್, ಎನ್.ಎ.ಯುನೈಟೆಡ್ ಬಿಲ್ಡಿಂಗ್,
ಕದ್ರಿ ರೋಡ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:27-1-2009 ರಂದು ಸಂಜೆ 6-30 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬೆಳ್ತಂಗಡಿ ತಾಲೂಕು ಮೇಲಂತಬೆಟ್ಟು ಗ್ರಾಮದ ಕಲ್ಲುಗುಡ್ಡೆ ಜಂಕ್ಷನ್‌ನಲ್ಲಿ ಸಾರಾಯಿ ಸ್ಯಾಚೆಟ್‌ಗಳನ್ನು ಮಾರಾಟ ಮಾಡುತ್ತಿರುತ್ತಾರೆ ಎಂದು ಸಾರ್ವಜನಿಕರು ದೂರಿರುವ ಹಿನ್ನಲೆಯಲ್ಲಿ ಸದರಿ ಸ್ಥಳದಲ್ಲಿ ಗಸ್ತು ತಿರುಗುತ್ತಿರುವಾಗ, ಬೆಳ್ತಂಗಡಿ ಪೇಟೆಯ ಚರ್ಚ್ ರೋಡ್‌ನಿಂದ ಮೇಲಂತಬೆಟ್ಟು ಕಡೆಗೆ ಬರುತ್ತಿದ್ದ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267 ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಸದರಿ ವಾಹನವನ್ನು ನಿಲ್ಲಿಸಿ ಚಾಲಕನು ಅತೀ ಗಾಬರಿಯಿಂದ ಹೆದರಿ ನಡುಗಲಾರಂಭಿಸಿದನು. ಸಂಶಯಗೊಂಡು ವಾಹನವನ್ನು ತಪಾಸಣೆ ಮಾಡುವ ಮೊದಲು ಸದರಿ ಸ್ಥಳದಲ್ಲಿ ಸಾಕ್ಷಿದಾರರನ್ನು ಹುಡುಕಲಾಗಿ, ಯಾರೂ ಮುಂದೆ ಬಾರದ ಕಾರಣ ಹಾಗೂ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದಿದ್ದುದರಿಂದ, ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ, ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿ ಮಾಡಿಕೊಂಡು ಸದರಿ ವ್ಯಕ್ತಿಯನ್ನು ವಿಚಾರಿಸಿದಾಗ, ತನ್ನ ಹೆಸರು ಯಶೋಧರ, ಬಿನ್:ಲಕ್ಷ್ಮಣ (36 ವ), ಕಲ್ಲುಗುಡ್ಡೆ ಮನೆ, ಮೇಲಂತಬೆಟ್ಟು ಗ್ರಾಮ ಮತ್ತು ಪೋಸ್ಟ್, ಬೆಳ್ತಂಗಡಿ ತಾಲೂಕು ಎಂದು ತಿಳಿಸಿದನು. ಆತನನ್ನು ಶೋಧಿಸಿದಾಗ, ಆತನಲ್ಲಿ ಒಂದು ನೋಕಿಯೊ ಮೊಬೈಲ್ ಮತ್ತು ನಗದು ಹಣ ರೂ.220/– ಇದ್ದು, ನಂತರ ವಾಹನವನ್ನು ಶೋಧನೆ ಮಾಡಿದಾಗ ಅದರ ಡೆಸ್ಕ್ ಬಾಕ್ಸ್‌ನಲ್ಲಿ ಸಾರಾಯಿ ಸ್ಯಾಚೆಟ್‌ಗಳು ಹಾಗೂ ಮದ್ಯದ ಸೀಸೆಗಳು ಕಂಡು ಬಂತು. ಅದನ್ನು ಎಣಿಸಿ ನೋಡಿದಾಗ 100 ಎಂ.ಎಲ್.ನ 20 ಸಾರಾಯಿ ಸ್ಯಾಚೆಟ್‌ಗಳು ಮತ್ತು 180 ಎಂ.ಎಲ್.ನ ವನ್‌ಅಪ್ ಲೇಬಲ್ ಇರುವ ಮದ್ಯ ತುಂಬಿರುವ 8 ಸೀಸೆಗಳು ಇರುವುದು ಕಂಡು ಬಂತು. ಸಾರಾಯಿ ಸ್ಯಾಚೆಟ್‌ಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ದಿ ಮೈಸೂರು ಶುಗರ್ ಕಂಪೆನಿ ಲಿಮಿಟೆಡ್, ಮಂಡ್ಯ ಎಂದು ಕೆಂಪು ಅಕ್ಷರದಲ್ಲಿ ಮುದ್ರಿತವಾಗಿದ್ದು, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಮದ್ಯದ ಸೀಸೆಗಳನ್ನು ಮೇಲಂತ ಪರಿಸರದಲ್ಲಿ ಇರುವ ವ್ಯಕ್ತಿಗಳಿಗೆ ಮಾರಾಟ ಮಾಡಲೆಂದು ಕೊಂಡೊಯ್ಯುವುದು ಎಂದು ಆರೋಪಿ ತಿಳಿಸಿರುತ್ತಾನೆ. ನಂತರ ದೊರೆತ ಸಾರಾಯಿ ಸ್ಯಾಚೆಟ್‌ಗಳಿಂದ ಮತ್ತು ಮದ್ಯದ ಸೀಸೆಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು, ಅದಕ್ಕೆ ಬಟ್ಟೆಯಿಂದ ಸುತ್ತಿ ಅರಗು ಸೀಲ್ ಹಾಕಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ನಂತರ ಆರೋಪಿಯ ಹೆಸರು ಮತ್ತು ವಿಳಾಸವಿರುವ ಗುರುತಿನ ಚೀಟಿಯನ್ನು ತಯಾರಿಸಿ ಮಾದರಿ ಸ್ಯಾಚೆಟ್‌ಗಳಿಗೆ ಮತ್ತು ಮಾದರಿ ಸೀಸೆಗಳಿಗೆ ಅಂಟಿಸಲಾಯಿತು. ಸದರಿ ವಾಹನವನ್ನು ಪರಿಶೀಲಿಸಿದಾಗ, ಇದರ ಇಂಜಿನ್ ಸಂ: 676809 ಆಗಿದ್ದು, ಚಾಸೀಸ್ ನಂಬರು ಕಂಡು ಬಂದಿರುವುದಿಲ್ಲ. ಸದರಿ ವಾಹನದಲ್ಲಿ ಯಾವುದೇ ರಹದಾರಿ ಅಥವಾ ಬಿಲ್ಲುಗಳು ದೊರಕದ ಕಾರಣ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14, 15 ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ

ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಆರೋಪಿಯನ್ನು ದಸ್ತಗಿರಿ ಮಾಡಿ, ಆರೋಪಿಯ ವಿರುದ್ದ ತಕ್ಷೀರು ಸಂ:19/2008-09 ದಿ: 27-01-2009 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತನಿಖಾ ವರದಿ ಸಂಖ್ಯೆ: ಸಿಆರ್ಎಂ/35/2008-09 ದಿ:6-6-2009 ರ ವರದಿಯಲ್ಲಿ, ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳ ಹಾಗೂ ಮದ್ಯದ ಸೀಸೆಗಳಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–106-8 ದಿ:6-4-2009 ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.24 ಮತ್ತು ಮದ್ಯದ ಮದ್ಯಸಾರ ಪ್ರಮಾಣ ಶೇ.41-5 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಎಲ್.ಎಂ.ಎಲ್. ವೆಸ್ಪಾ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಇ–5267 ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಲ್ಲಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರಿಂದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆದು, ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ವಾಹನದ ನೋಂದಣಿ ಮಾಲೀಕರಾದ ಯುನೈಟೆಡ್ ಮೋಟಾರ್ಸ್, ಎನ್.ಎ.ಯುನೈಟೆಡ್ ಬಿಲ್ಡಿಂಗ್, ಕದ್ರಿ ರೋಡ್, ಮಂಗಳೂರು ಆಗಿರುತ್ತದೆ ಹಾಗೂ ಚಾಸೀಸ್ ನಂಬರು ಸಿಹೆಚ್ 678392 ಮತ್ತು ಇಂಜಿನ್ ನಂ:ಸಿಎನ್ 6709 ಆಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಇಂಜಿನ್ ನಂಬರಿಗೆ ಒಂದಕ್ಕೊಂದು ತಾಳೆಯಾಗಿರುತ್ತದೆ. ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ ಇವರು ವಾಹನ ನೋಂದಣಿ ಮಾಲೀಕರಾದ ಯುನೈಟೆಡ್ ಮೋಟಾರ್ಸ್, ಎನ್.ಎ.ಯುನೈಟೆಡ್ ಬಿಲ್ಡಿಂಗ್, ಕದ್ರಿ ರೋಡ್, ಮಂಗಳೂರು ಇವರಿಗೆ ದಿ:25-3-2009 ರಂದು ವಾಹನವು ಅಕ್ರಮದಲ್ಲಿ ಭಾಗಿಯಾದ ಬಗ್ಗೆ ಅಬಕಾರಿ ಕಾಯಿದೆ ಕಲಂ 43ಬಿ ರಡಿ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಆರ್.ಸಿ. ಮಾಲೀಕರು ದಿ:28-3-2009 ರಂದು ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿರುತ್ತಾರೆ. ಸದರಿ ಉತ್ತರದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ದಿ:27-6-1995 ರಂದು ಶ್ರೀ.ಹಸನಬ್ಬ, ಬಿನ್:ಅಬ್ದುಲ್ಲಾ, ಬಸ್‌ಸ್ಟ್ಯಾಂಡ್ ಬಳಿ, ಬೆಳ್ತಂಗಡಿ ಇವರಿಗೆ ನೀಡಿದ್ದು, ಆ ವ್ಯಕ್ತಿಗೆ ವಾಹನವನ್ನು ತನ್ನ ಹೆಸರಿಗೆ ಹಸ್ತಾಂತರಿಸಿಕೊಳ್ಳಲು ಫಾರಂ–29 ಮತ್ತು 30 ಹಾಗೂ ಮೂಲ ಆರ್.ಸಿ. ಪುಸ್ತಕವನ್ನು ಕೊಟ್ಟಿರುತ್ತೇನೆಂದು ತಿಳಿಸಿರುತ್ತಾರೆ. ಆದರೆ ಯಾವುದೇ ಅಧಿಕೃತ ದಾಖಲಾತಿಗಳನ್ನು ನೀಡಿರುವುದಿಲ್ಲ. ನಂತರ ಹಸನಬ್ಬ, ಬೆಳ್ತಂಗಡಿ ಎಂಬ ವ್ಯಕ್ತಿಯ ಬಗ್ಗೆ ಸ್ಥಳೀಯ ಪರಿಸರದಲ್ಲಿ ಹುಡುಕಿ ಕೇಳಲಾಗಿ, ಆ ಹೆಸರಿನ ವ್ಯಕ್ತಿಯ ಬಗ್ಗೆ ಯಾವುದೇ ಮಾಹಿತಿ ಲಭ್ಯವಾಗಿರುವುದಿಲ್ಲ. ಆದುದರಿಂದ ಎಲ್.ಎಂ.ಎಲ್. ವೆಸ್ಪಾ ಮೋಟಾರು ಸೈಕಲ್‌ನಲ್ಲಿ ಆರೋಪಿಯು ಅಕ್ರಮವಾಗಿ ಸಾರಾಯಿ ಮತ್ತು ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರು ದಾಖಲಿಸಿ ಈಗಾಗಲೇ 8 ತಿಂಗಳು ಕಳೆದರೂ, ಅವರ ಕಚೇರಿಯಲ್ಲಿ ಆರೋಪಿಯಾಗಲಿ ಅಥವಾ ವಾಹನದ ಮಾಲೀಕರಾಗಲಿ ವಾಹನದ ಹಾಗೂ ಸೊತ್ತುಗಳ ಬಿಡುಗಡೆಗಾಗಿ ಯಾರೂ ಅಧಿಕೃತ ದಾಖಲಾತಿಗಳಿಂದ ಇದುವರೆಗೂ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿ ಹಾಗೂ ಮದ್ಯವನ್ನು ನಾಶಪಡಿಸಲು ವಾಹನ, ನಗದು ಹಣ ಮತ್ತು ಮೊಬೈಲ್‌ನ್ನು ವಿಲೇವಾರಿಗೊಳಿಸಲು ಸೂಕ್ತ ಆದೇಶ ನೀಡಬೇಕೆಂದು ದಿ:06-06-2009 ರ ತನಿಖಾ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ವರದಿ ಸಂಖ್ಯೆ: 46/2008-09 ದಿ:30-6-2009 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ದಿ:27-1-2009 ರಂದು ದಾಖಲಿಸಿದ ಮೊಕದ್ದಮೆಗೆ ಸಂಬಂಧಿಸಿದ ಈ ಕೆಳಕಂಡ ಸೊತ್ತುಗಳ ಬಗ್ಗೆ ತಕ್ಷೀರು ದಾಖಲಿಸಿ ಈಗಾಗಲೇ 8 ತಿಂಗಳು ಕಳೆದರೂ ಆರೋಪಿಯಾಗಲಿ, ಅಥವಾ ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿಗಳೊಂದಿಗೆ ಸದರಿ ಸೊತ್ತುಗಳನ್ನು ತನ್ನದೆಂದು ಯಾರೂ ಸಹಾ ಅರ್ಜಿ ಇದುವರೆಗೂ ಸಲ್ಲಿಸಿರುವುದಿಲ್ಲ.

**ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳು;**

1) ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267
2) 100 ಎಂ.ಎಲ್.ನ 20 ಸಾರಾಯಿ ಸ್ಯಾಚೆಟ್‌ಗಳು
3) 180 ಎಂ.ಎಲ್.ನ ವನ್ ಅಪ್ ವಿಸ್ಕಿ 8 ಸೀಸೆಗಳು
4) ನಗದು ಹಣ ರೂ.220/–
5) ನೋಕಿಯೊ ಮೊಬೈಲ್ ಫೋನ್:1

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) **ಮೊದಲನೇ ವಿವಾದಾಂಶ:** ದಿ: 27-1-2009 ರಂದು ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಮತ್ತು ಸಾರಾಯಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) **ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) **ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಕೆ.ಟಿ.ಧರ್ಮಪ್ಪ, ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ ಇವರು ದಿ:11-8-09 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:10-6-2006 ರಿಂದ ಇಲ್ಲಿಯವರೆಗೆ ಬೆಳ್ತಂಗಡಿ ವಲಯ ಕಚೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿನಾಂಕ:27-1-2009 ರಂದು ಸಂಜೆ 6-30 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರೊಂದಿಗೆ ಬೆಳ್ತಂಗಡಿ ತಾಲೂಕು ಮೇಲಂತಬೆಟ್ಟು ಗ್ರಾಮದ ಕಲ್ಲುಗುಡ್ಡೆ ಜಂಕ್ಷನ್‌ನಲ್ಲಿ ಸಾರಾಯಿ ಸ್ಯಾಚೆಟ್‌ಗಳನ್ನು ಮಾರಾಟ ಮಾಡುತ್ತಿದ್ದಾರೆ ಎಂದು ಸಾರ್ವಜನಿಕರು ದೂರಿರುವ ಹಿನ್ನಲೆಯಲ್ಲಿ ಸದರಿ ಸ್ಥಳದಲ್ಲಿ ಗಸ್ತು ತಿರುಗುತ್ತಿರುವಾಗ, ಬೆಳ್ತಂಗಡಿ ಪೇಟೆಯ ಚರ್ಚ್ ರೋಡ್‌ನಿಂದ ಮೇಲಂತಬೆಟ್ಟು ಕಡೆಗೆ ಬರುತ್ತಿದ್ದ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267 ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಸದರಿ ವಾಹನವನ್ನು ನಿಲ್ಲಿಸಿ ಚಾಲಕನು ಅತೀ ಗಾಬರಿಯಿಂದ ಹೆದರಿ ನಡುಗಲಾರಂಭಿಸಿದನು. ಸಂಶಯಗೊಂಡು ವಾಹನವನ್ನು ತಪಾಸಣೆ ಮಾಡುವ ಮೊದಲು ಸದರಿ ಸ್ಥಳದಲ್ಲಿ ಸಾಕ್ಷಿದಾರರನ್ನು ಹುಡುಕಲಾಗಿ, ಯಾರೂ ಮುಂದೆ ಬಾರದ ಕಾರಣ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶವಿಲ್ಲದಿರುವುದರಿಂದ, ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿ ಮಾಡಿಕೊಂಡು, ಸದರಿ ವ್ಯಕ್ತಿಯನ್ನು ವಿಚಾರಿಸಿದಾಗ, ತನ್ನ ಹೆಸರು ಯಶೋಧರ, ಬಿನ್:ಲಕ್ಷ್ಮಣ (36 ವ), ಕಲ್ಲುಗುಡ್ಡೆ ಮನೆ, ಮೇಲಂತಬೆಟ್ಟು ಗ್ರಾಮ ಮತ್ತು ಪೋಸ್ಟ್, ಬೆಳ್ತಂಗಡಿ ತಾಲೂಕು ಎಂದು ತಿಳಿಸಿದನು. ಆತನನ್ನು ಶೋಧಿಸಿದಾಗ, ಆತನಲ್ಲಿ ಒಂದು ನೋಕಿಯೊ ಮೊಬೈಲ್ ಮತ್ತು ನಗದು ಹಣ ರೂ.220/- ಇದ್ದು, ವಾಹನವನ್ನು ಶೋಧನೆ ಮಾಡಿದಾಗ ಅದರ ಡೆಸ್ಕ್ ಬಾಕ್ಸ್‌ನಲ್ಲಿ ಸಾರಾಯಿ ಸ್ಯಾಚೆಟ್‌ಗಳು ಹಾಗೂ ಮದ್ಯದ ಸೀಸೆಗಳು ಇರುವುದು ಕಂಡು ಬಂತು. ಅದನ್ನು ಎಣಿಸಿ ನೋಡಿದಾಗ 100 ಎಂ.ಎಲ್.ನ 20 ಸಾರಾಯಿ ಸ್ಯಾಚೆಟ್‌ಗಳು ಮತ್ತು 180 ಎಂ.ಎಲ್.ನ ವನ್‌ಅಪ್ ಲೇಬಲ್ ಇರುವ ಮದ್ಯ ತುಂಬಿರುವ 8 ಸೀಸೆಗಳು ಇರುವುದು ಕಂಡು ಬಂತು. ಸಾರಾಯಿ ಸ್ಯಾಚೆಟ್‌ಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ದಿ ಮೈಸೂರು ಶುಗರ್ ಕಂಪೆನಿ ಲಿಮಿಟೆಡ್, ಮಂಡ್ಯ ಎಂದು ಕೆಂಪು ಅಕ್ಷರದಲ್ಲಿ ಮುದ್ರಿತವಾಗಿದ್ದು, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಮದ್ಯದ ಸೀಸೆಗಳನ್ನು ಮೇಲಂತ ಪರಿಸರದಲ್ಲಿ ಇರುವ ವ್ಯಕ್ತಿಗಳಿಗೆ ಮಾರಾಟ ಮಾಡಲೆಂದು ಕೊಂಡೊಯ್ಯುವುದು ಎಂದು ಆರೋಪಿ ತಿಳಿಸಿರುತ್ತಾನೆ. ನಂತರ ದೊರೆತ ಸಾರಾಯಿ ಸ್ಯಾಚೆಟ್‌ಗಳಿಂದ ಮತ್ತು ಮದ್ಯದ ಸೀಸೆಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು, ಅದಕ್ಕೆ ಬಟ್ಟೆಯಿಂದ ಸುತ್ತಿ ಅರಗು ಹಾಕಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ನಂತರ ಆರೋಪಿಯ ಹೆಸರು ಮತ್ತು ವಿಳಾಸವಿರುವ ಚೀಟಿಯನ್ನು ತಯಾರಿಸಿ ಮಾದರಿ ಸ್ಯಾಚೆಟ್‌ಗಳಿಗೆ ಮತ್ತು ಮಾದರಿ ಸೀಸೆಗಳಿಗೆ ಅಂಟಿಸಲಾಯಿತು. ಸದರಿ ವಾಹನವನ್ನು ಪರಿಶೀಲಿಸಿದಾಗ, ಇದರ ಇಂಜಿನ್ ಸಂ: 676809 ಆಗಿದ್ದು, ಚಾಸೀಸ್ ನಂಬರು ಕಂಡು ಬಂದಿರುವುದಿಲ್ಲ. ಇದು ಅಕ್ರಮ ಮದ್ಯ ಹಾಗೂ ಸಾರಾಯಿ ಸಾಗಾಣಿಕೆಯಾಗಿರುವುದರಿಂದ, ಸದರಿ ಸೊತ್ತುಗಳನ್ನು ಹಾಗೂ ಆರೋಪಿಯನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಮಹಜರನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು. ಮಾದರಿ ಮೊಹರನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ನಂತರ ಸೊತ್ತುಗಳನ್ನು ಕಚೇರಿಗೆ ತಂದು ಪ್ರಥಮ ಮಾಹಿತಿಯನ್ನು ತಯಾರಿಸಿ ಆರೋಪಿಯೊಂದಿಗೆ ದಿ:28-1-2009 ರಂದು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆ. ತದನಂತರ

ವಾಹನದ ಮಾಲಿಕತ್ವದ ಬಗ್ಗೆ ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಿ, ಅವರಿಂದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆದಿರುತ್ತೇನೆ. ವಾಹನದ ಬಿ ವಹಿಯಲ್ಲಿ ನಮೂದಿಸಿದ ಮಾಲೀಕರಾದ ಯುನೈಟೆಡ್ ಮೋಟಾರ್ಸ್, ಯುನೈಟೆಡ್ ಬಿಲ್ಡಿಂಗ್, ಕದ್ರಿ ರೋಡ್, ಮಂಗಳೂರು ಇವರಿಗೆ ತಮ್ಮ ಕಚೇರಿಯಿಂದ ಕಾರಣ ಕೇಳಿ ನೋಟೀಸನ್ನು ನೀಡಿರುತ್ತೇನೆ. ಅವರು ಉತ್ತರವನ್ನು ನೀಡುತ್ತಾ, ದಿ:27-6-1995 ರಂದು ಹಸನಬ್ಬ ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ವಾಹನಕ್ಕೂ ಹಾಗೂ ತನಗೂ ಯಾವುದೇ ಸಂಬಂಧವಿಲ್ಲವೆಂದು ಸ್ಪಷ್ಟೀಕರಣ ನೀಡಿರುತ್ತಾರೆ. ವಾಹನವನ್ನು ಪಡೆದುಕೊಂಡ ವ್ಯಕ್ತಿಯಾದ ಹಸನಬ್ಬ ಇವರನ್ನು ಪತ್ತೆ ಹಚ್ಚಲು ಪ್ರಯತ್ನಿಸಲಾಗಿ, ಸದರಿ ಹೆಸರಿನ ವ್ಯಕ್ತಿ ಆ ವಿಳಾಸದಲ್ಲಿ ಇಲ್ಲವೆಂದು ತಿಳಿದು ಬಂದಿದ್ದು ಹಾಗೂ ಪ್ರಕರಣದಲ್ಲಿ ತೆಗೆದ ಮದ್ಯ ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿಯನ್ನು ಪಡೆದಿರುತ್ತೇನೆ. ವಾಹನದ ಮಾಲಿಕತ್ವವನ್ನು ಕೋರಿ ಯಾರೂ ಮುಂದೆ ಬಾರದ ಕಾರಣ, ವಾಹನದ ಮಾಲಿಕತ್ವವನ್ನು ಪತ್ತೆ ಮಾಡುವ ಸಂಭವವಿಲ್ಲವೆಂದು ಖಚಿತವಾಗಿರುವುದರಿಂದ, ವಾಹನ ಹಾಗೂ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ದಿ:6-6-2009 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–3 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–3ಎ ಎಂದು ಗುರುತಿಸಲಾಯಿತು. ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–4 ಎಂದು, ರಾಸಾಯನಿಕ ವರದಿಯನ್ನು ನಿಶಾನೆ ಪಿ–5 ಎಂದು, ತನಿಖಾ ವರದಿಯನ್ನು ನಿಶಾನೆ ಪಿ–6 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–6ಎ ಎಂದು ಗುರುತಿಸಲಾಯಿತು. ಪ್ರಕರಣಕ್ಕೆ ಸಂಬಂಧಿಸಿದಂತೆ ಅಂತಿಮ ದೋಷಾರೋಪಣ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ದಿನಾಂಕ: 9-7-2009 ರಂದು ಸಲ್ಲಿಸಲಾಗಿದೆ ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:27-1-2009 ರಂದು ಜಪ್ತುಪಡಿಸಿಕೊಂಡಿರುವ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267 ರಲ್ಲಿ ಅಕ್ರಮವಾಗಿ 1-440 ಲೀಟರ್ ಮದ್ಯ ಹಾಗೂ 100 ಎಂ.ಎಲ್.ನ 20 ಸಾರಾಯಿ ಸ್ಯಾಚೆಟ್‌ಗಳನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಯು ಅಕ್ರಮವಾಗಿ ಮದ್ಯ ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯ ಹಾಗೂ ಸಾರಾಯಿ ಎಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267ನ್ನು ವಶಪಡಿಸಿಕೊಂಡು ಸುಮಾರು 8 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಬೆಳ್ತಂಗಡಿ ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಹಾಗೂ ಆರೋಪಿಯು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ನೀಡಲಾಗಿರುವ ಕಾರಣ ಕೇಳಿ ನೋಟೀಸಿಗೆ ಅನುಗುಣವಾಗಿ ಯುನೈಟೆಡ್ ಮೋಟಾರ್ಸ್, ಎನ್.ಎ.ಯುನೈಟೆಡ್ ಬಿಲ್ಡಿಂಗ್, ಕದ್ರಿ ರೋಡ್, ಮಂಗಳೂರು ಇವರು ತನ್ನ ವಾಹನವನ್ನು ದಿ:27-6-1995 ರಂದು ಹಸ್ತಾಂತರಿಸಿರುತ್ತೇನೆ. ಫಾರಂ–29 ಮತ್ತು 30 ಕ್ಕೆ ಸಹಿ ಮಾಡಿಕೊಂಡಿರುತ್ತೇನೆ ಎಂದು

ತಿಳಿಸಿರುತ್ತಾರೆ. ಆದರೆ ಅಧಿಕೃತ ದಾಖಲಾತಿಗಳು ಹಾಜರುಪಡಿಸಿರುವುದಿಲ್ಲ. ಆದುದರಿಂದ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ದಸ್ತಗಿರಿಯಾದ ಆರೋಪಿಯಾದ ಯಶೋಧರ ಇವರು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದುದರಿಂದ ವಾಹನ ಮಾಲೀಕರೇ ಸ್ವತ: ತನ್ನ ಮೋಟಾರು ಸೈಕಲ್‌ನಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯ ಹಾಗೂ ಸಾರಾಯಿಯನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವು ಈಗಾಗಲೇ 8 ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಆರೋಪಿತರು ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ:ಕೆಎ–19–ಇ–5267 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/227/ಡಿಟಿಸಿಆರ್/2008–09 ದಿನಾಂಕ:17ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತಕ್ಷೀರು ಸಂ: 19/2008-09 ದಿ:27-1-2009 ರಲ್ಲಿ ಜಪ್ತುಪಡಿಸಿರುವ ಈ ಕೆಳಕಂಡ ಸೊತ್ತುಗಳನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

**ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳು:**

1) ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ: ಕೆಎ–19–ಇ–5267
2) 100 ಎಂ.ಎಲ್.ನ 20 ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ, ಉಳಿದ 15 ಸಾರಾಯಿ ಸ್ಯಾಚೆಟ್‌ಗಳು:1-500 ಲೀ. ಸಾರಾಯಿ.
3) 180 ಎಂ.ಎಲ್.ನ ವನ್‌ಅಪ್ ವಿಸ್ಕಿ 8 ಸೀಸೆಗಳಿಂದ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ, ಉಳಿದ 6 ಮದ್ಯದ ಸೀಸೆಗಳು: 1-080 ಲೀ. ಮದ್ಯ.
4) ನಗದು ಹಣ ರೂ.220/–
5) ನೋಕಿಯೊ ಮೊಬೈಲ್ ಫೋನ್:1

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯ ಹಾಗೂ ಸಾರಾಯಿಯನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಇಎಸ್/2007 ದಿ:13-7-2007 ರಂತೆ ಮಾರಾಟ ಮಡಲು ನಿಷೇಧಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸುವಂತೆ ಆದೇಶ ಇರುವುದರಿಂದ, ಸದ್ರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43ಎ(3) ರ ಅನ್ವಯ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರುರವರ ಸುತ್ತೋಲೆ ಸಂಖ್ಯೆ:ಇಸಿಸಿ/73/ಸಿಆರ್‌ಎಂ/2004 ದಿ:12-9-2005ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ, ಮದ್ಯವನ್ನು ಸೀಸೆಗಳ ಸಮೇತ ಹಾಗೂ ಸಾರಾಯಿಯನ್ನು ನಾಶಪಡಿಸಲು ಆದೇಶಿಸಿದೆ ಹಾಗೂ ನೋಕಿಯೊ ಮೊಬೈಲ್ ಫೋನ್‌ನ್ನು ವಿಲೇವಾರಿಗೊಳಿಸಲು ಹಾಗೂ ನಗದು ಹಣ ರೂ.220/– ನ್ನು ಚಲನ್ ಮೂಲಕ ಸರಕಾರಕ್ಕೆ ಪಾವತಿಸಿ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:17-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಪಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1: ಶ್ರೀ.ಕೆ.ಟಿ.ಧರ್ಮಪ್ಪ, ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ಅನುಬಂಧ–2**

**ಪಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರು.
ನಿಶಾನೆ ಪಿ–1ಎ : ಮಹಜರಿನಲ್ಲಿ ಪಿರ್ಯಾದುದಾರರ ಸಹಿ
ನಿಶಾನೆ ಪಿ–2 : ಮಾದರಿ ಮೊಹರು
ನಿಶಾನೆ ಪಿ–2ಎ : ಮಾದರಿ ಮೊಹರಿನಲ್ಲಿರುವ ಪಿರ್ಯಾದುದಾರರ ಸಹಿ
ನಿಶಾನೆ ಪಿ–3 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–3ಎ : ಪ್ರಥಮ ಮಾಹಿತಿ ವರದಿಯಲ್ಲಿ ಪಿರ್ಯಾದುದಾರರ ಸಹಿ
ನಿಶಾನೆ ಪಿ–4 : ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–5: ರಾಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–6: ತನಿಖಾ ವರದಿ
ನಿಶಾನೆ ಪಿ–6ಎ : ತನಿಖಾ ವರದಿಯಲ್ಲಿರುವ ಪಿರ್ಯಾದುದಾರರ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.917

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/262/ಡಿಟಿಸಿಆರ್/2008–09 ದಿನಾಂಕ:17ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು(ನಂ.2),
ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ಆರೋಪಿಗಳು:**
ಕೃಷ್ಣಪ್ಪ ಪೂಜಾರಿ (45 ವ),
ಕಿಲ್ಲೂರು ಮನೆ, ಮಿತ್ತಬಾಗಿಲು ಗ್ರಾಮ,
ಬೆಳ್ತಂಗಡಿ.

**ವಾಹನ ಮಾಲೀಕರು:**
ಪದ್ಮನಾಭ ಪೂಜಾರಿ, ಬಿನ್:ವೆಂಕಪ್ಪ ಪೂಜಾರಿ, ವಲ್ಲಿಪಾಡಿ ಕೊಪ್ಪಳ ಹೌಸ್, ರೇಂಜ್ ಆಫೀಸಿನ ಹಿಂದುಗಡೆ, ಮೂಡಬಿದ್ರೆ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21-02-2009 ರಂದು ಸಂಜೆ 5-00 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬೆಳ್ತಂಗಡಿ ತಾಲೂಕು ನಾವೂರು ಇಂದಬೆಟ್ಟು ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ, ನಾವೂರಿನಿಂದ ಇಂದಬೆಟ್ಟು ಕಡೆಗೆ ಹೋಗುತ್ತಿದ್ದ ಮೋಟಾರು ಸೈಕಲ್‌ನ ಪೆಟ್ರೋಲ್ ಟ್ಯಾಂಕ್‌ನ ಮೇಲೆ ಪ್ಲಾಸ್ಟಿಕ್ ಗೋಣಿ ಚೀಲದ ಕಟ್ಟು ಒಂದು ಇರುವುದು ಕಂಡು ಬಂತು. ಅನುಮಾನದ ಮೇರೆಗೆ ಸದರಿ ದ್ವಿಚಕ್ರ ವಾಹನವನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಬೈಕ್ ಸವಾರನು ಮೋಟಾರು ಸೈಕಲನ್ನು ಅತೀ ವೇಗವಾಗಿ ಚಲಾಯಿಸಿಕೊಂಡು ಹೋಗಲು ಪ್ರಯತ್ನಿಸಿದಾಗ, ಆತನನ್ನು ಬೆನ್ನಟ್ಟಿ ಒಂದೆರಡು ಕಿ.ಮೀ.ಗಳಷ್ಟು ದೂರ ಹೋದ ನಂತರ ಸದರಿ ಸವಾರನು ಪ್ಲಾಸ್ಟಿಕ್ ಚೀಲದ ಪೊಟ್ಟಣವನ್ನು ಮಾರ್ಗದ ಬದಿಗೆ ಎಸೆದು ಬೈಕನ್ನು ಮಾರ್ಗದ ಬದಿಯಲ್ಲಿ ಬಿಟ್ಟು ಪಕ್ಕದ ಗುಡ್ಡದಲ್ಲಿ ಪರಾರಿಯಾಗಿರುತ್ತಾನೆ. ಓಡಿ ಹೋದ ಆರೋಪಿಯು ಕೃಷ್ಣಪ್ಪ ಪೂಜಾರಿ ಎಂದು ತಿಳಿದು ಬಂದಿರುತ್ತದೆ. ಸದರಿ ಬೈಕ್ ಹಾಗೂ ಆರೋಪಿಯು ಎಸೆದಿರುವ ಕಟ್ಟನ್ನು ಶೋಧಿಸಬೇಕಾಗಿರುವುದರಿಂದ, ಮಾನ್ಯ ಘನ ನ್ಯಾಯಾಲಯದಿಂದ ಶೋಧನಾ ವಾರಂಟ್ ತರಲು

ಸಮಯಾವಕಾಶವಿಲ್ಲದಿದ್ದುದರಿಂದ, ಸದರಿ ಕಾರಣವನ್ನು ಸ್ಥಳದಲ್ಲಿಯೇ ದಾಖಲಿಸಿಕೊಂಡು ಶೋಧನೆ ಸಮಯದಲ್ಲಿ ಪಂಚರನ್ನು ಹುಡುಕಲಾಗಿ, ಯಾರೂ ಸಿಗದ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರಾಗಿರಿಸಿಕೊಂಡು ಶೋಧನೆ ನಡೆಸಲಾಯಿತು. ಪ್ಲಾಸ್ಟಿಕ್ ಚೀಲವನ್ನು ಪರಿಶೀಲಿಸಿದಾಗ, ಅದರಲ್ಲಿ 180 ಎಂ.ಎಲ್.ನ ಮದ್ಯ ತುಂಬಿರುವ ಬಾಟಲ್‌ಗಳು ಹಾಗೂ ಒಡೆದ ಬಾಟಲ್‌ಗಳು ಪತ್ತೆಯಾದವು. ಅವುಗಳನ್ನು ಎಣಿಸಿ ನೋಡಲಾಗಿ, ಹೈವೆ ಫೈನ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 180 ಎಂ.ಎಲ್.ನ 32 ಸೀಸೆಗಳು ಹಾಗೂ ಒಡೆದು ಹೋದ 180 ಎಂ.ಎಲ್.ನ 16 ಬಾಟಲ್‌ಗಳು ಪತ್ತೆಯಾದವು. ಸದರಿ ಮೋಟಾರು ಬೈಕನ್ನು ಪರಿಶೀಲಿಸಲಾಗಿ, ಅದು ಬಜಾಜ್ ಕವಾಸಕಿ ಎಂಬ ವಾಹನವಾಗಿದ್ದು, ಇದರ ನೋಂದಣಿ ಸಂಖ್ಯೆ: ಕೆಎ–19–ಕ್ಯೂ–2432 ಆಗಿದೆ. ಇದರ ಚಾಸೀಸ್ ಸಂಖ್ಯೆ: ಡಿಎಫ್‌ಎಫ್‌ಬಿಹೆಚ್‌ಎಲ್ 22569 ಆಗಿರುತ್ತದೆ. ಸದರಿ ಮದ್ಯದಿಂದ 180 ಎಂ.ಎಲ್.ನ ವಿಸ್ಕಿ ತುಂಬಿದ ಎರಡು ಬಾಟ್ಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಮಾದರಿಗಳನ್ನು ತೆಗೆದು, ಅವುಗಳಿಗೆ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು ಹಾಗೂ ಸ್ಥಳದಲ್ಲಿಯೇ ಮಾದರಿ ಮೊಹರು ತಯಾರಿಸಲಾಯಿತು. ಸದರಿ ವಾಹನದಲ್ಲಿ ಯಾವುದೇ ರಹದಾರಿ ಅಥವಾ ಬಿಲ್ಲುಗಳು ದೊರಕದ ಕಾರಣ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32,38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಹೋದ ಆರೋಪಿಯ ವಿರುದ್ಧ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ ಇವರು ತಕ್ಷೀರು ಸಂ:6/2008-09 ದಿ:21-02-2009 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/41/2008-09 ದಿ:25-5-2009 ರ ವರದಿಯಲ್ಲಿ ವಶಪಡಿಸಿಕೊಂಡಿರುವ ಮದ್ಯದ ಸೀಸೆಗಳಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–112-2 ದಿ:8-4-2009 ರ ವರದಿಯಲ್ಲಿ, ಮದ್ಯದ ಮದ್ಯಸಾರ ಪ್ರಮಾಣ ಶೇ.42 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಕವಾಸಕಿ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಕ್ಯೂ–2432 ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಲ್ಲಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರು ದಿ: 23-3-2009 ರಂದು ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ವಾಹನವು ಬಜಾಜ್ ಬಾಕ್ಸರ್ ಆಗಿದ್ದು, ಇದರ ಸಂಖ್ಯೆ: ಕೆಎ–19–ಕ್ಯೂ–2432 ಆಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಚಾಸೀಸ್ ನಂಬರು ಹಾಗೂ ಇಂಜಿನ್ ನಂಬರಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಇದರ ನೋಂದಣಿ ಆರ್.ಸಿ. ಮಾಲೀಕ ಪದ್ಮನಾಭ ಪೂಜಾರಿ, ಬಿನ್:ವೆಂಕಪ್ಪ ಪೂಜಾರಿ, ವಲ್ಲಿಪಾಡಿ ಕೊಪ್ಪಳ ಹೌಸ್, ರೇಂಜ್ ಆಫೀಸಿನ ಹಿಂದುಗಡೆ, ಮೂಡಬಿದ್ರೆ, ಮಂಗಳೂರು ಆಗಿರುತ್ತದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ವಾಹನದ ಆರ್.ಸಿ.ಮಾಲೀಕರಾದ ಶ್ರೀ.ಪದ್ಮನಾಭ ಪೂಜಾರಿ ಇವರಿಗೆ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಯಾವುದೇ ಉತ್ತರವನ್ನು ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರು ಅಕ್ರಮ ದಂಧೆಯಲ್ಲಿ ಭಾಗಿಯಾಗಿರುವುದು ಸ್ಪಷ್ಟವಾಗಿರುವುದರಿಂದ, ವಶಪಡಿಸಿಕೊಂಡ ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಮೋಟಾರು ಸೈಕಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಮತ್ತು ಮೋಟಾರು ಸೈಕಲನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ತನಿಖಾ ವರದಿಯನ್ನು ಆಧರಿಸಿ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ವರದಿ ಸಂಖ್ಯೆ: 52/2008-09 ದಿ:27-5-2009 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/262/ ಡಿಟಿಸಿಆರ್/2008-09 ದಿ:11-6-2009 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರು ಸೈಕಲನ್ನು ಹೊರತುಪಡಿಸಿ, ಉಳಿದ 5-760 ಲೀಟರ್ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಐಎಸ್/2007 ದಿ: 13-7-2007 ರಂತೆ ಮಾರಾಟ ಮಾಡಲು ನಿರ್ದೇಶಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸಲು ಆದೇಶಿಸಿರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43ಎ(3) ರನ್ವಯ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂ:ಇಸಿಸಿ/73/ಸಿಆರ್‌ಎಂ /2004 ದಿ: 12-9-2005 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ಮದ್ಯವನ್ನು ನಾಶಪಡಿಸಲು ಹಾಗೂ ಉಳಿದ ಸೀಸೆಗಳನ್ನು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ.ಜಿಲ್ಲೆ, ಮಂಗಳೂರು ಇವರು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ.ಪದ್ಮನಾಭ ಪೂಜಾರಿ, ಬಿನ್:ವೆಂಕಪ್ಪ ಪೂಜಾರಿ, ವಲ್ಲಿಪಾಡಿ ಕೊಪ್ಪಳ ಹೌಸ್, ರೇಂಜ್ ಆಫೀಸಿನ ಹಿಂದುಗಡೆ, ಮೂಡಬಿದ್ರೆ, ಮಂಗಳೂರು ಮತ್ತು ಓಡಿ ಹೋದ ಆರೋಪಿ ಕೃಷ್ಣಪ್ಪ ಪೂಜಾರಿ(45 ವ), ಕಿಲ್ಲೂರು ಮನೆ, ಮಿತ್ತಬಾಗಿಲು ಗ್ರಾಮ, ಬೆಳ್ತಂಗಡಿ ಇವರುಗಳಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ಮುಖಾಂತರ ದಿ:11-6-2009 ರಂದು ನೀಡಲಾಗಿದ್ದು, ವಾಹನ ಮಾಲೀಕರಿಗೆ ಹಾಗೂ ಆರೋಪಿಗೆ ನೋಟೀಸು ಜಾರಿಗೊಳಿಸಲಾಗಿದ್ದು ಹಾಗೂ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ಖುದ್ದಾಗಿ ದಿ:30-6-2009 ರಂದು ಪದ್ಮನಾಭ ಪೂಜಾರಿ ಹಾಗೂ ಆರೋಪಿಯಾದ ಕೃಷ್ಣಪ್ಪ ಪೂಜಾರಿ ಇವರುಗಳಿಗೆ ಕಾರಣ ಕೇಳಿ ನೋಟಿಸನ್ನು ಜಾರಿ ಮಾಡಿರುತ್ತಾರೆ. ಅದರೆ ಇದುವರೆಗೂ ವಾಹನ ಮಾಲೀಕರಾಗಲಿ, ಅವರ ಪರ ವಕೀಲರಾಗಲಿ ಹಾಗೂ ಓಡಿ ಹೋದ ಆರೋಪಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲವೆಂದು ತಮ್ಮ ಪತ್ರ ಸಂ:ಸಿಆರ್‌ಎಂ/41/2008-09 ದಿ:6-7-2009 ರ ವರದಿಯಲ್ಲಿ ತಿಳಿಸಿರುತ್ತಾರೆ.

ವಾಹನದ ನೋಂದಣಿ ಮಾಲೀಕರಾದ ಪದ್ಮನಾಭ ಪೂಜಾರಿ ಇವರಿಗೆ ನೀಡಲಾದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಬಿ ಪ್ರಕಾರ ನೀಡಿರುವ ಕಾರಣ ಕೇಳಿ ನೋಟೀಸಿಗೆ ಅನುಗುಣವಾಗಿ ಅವರು ದಿ:1-7-2009 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ. ತಾನು ತನ್ನ ವಾಹನವನ್ನು 3 ವರ್ಷದ ಮೊದಲೇ ಕೃಷ್ಣಪ್ಪ ಪೂಜಾರಿ ಇವರಿಗೆ ಮಾರಾಟ ಮಾಡಿರುತ್ತೇನೆ. ಈ ಬಗ್ಗೆ ಸಾರಿಗೆ ಅಧಿಕಾರಿಯವರ ಕಾನೂನು ಅನ್ವಯ ಫಾರಂ–29 ಮತ್ತು 30 ಕ್ಕೆ ಸಹಿ ಮಾಡಿ ಕೊಟ್ಟಿರುತ್ತೇನೆ. ತನಗೆ ಪೂರ್ತಿ ಹಣ ಸಂದಾಯವಾಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರು ಸೈಕಲಿಗೂ ಹಾಗೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ. ಆದರೆ ವಾಹನದ ವರ್ಗಾವಣೆಯಾದ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ: 21-2-2009 ರಂದು ಬಜಾಜ್ ಕವಾಸಕಿ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಕ್ಯೂ–2432 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀಮತಿ.ಎನ್.ಸೌಮ್ಯಲತ, ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ ಇವರು ದಿ:11-8-09 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಮೇ–2005 ರಿಂದ ಇಲ್ಲಿಯವರೆಗೆ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಕರಣಕ್ಕೆ ಸಂಬಂಧ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಫಿರ್ಯಾದಾದಾರರು ಹಸ್ತಾಂತರಿಸಲಾಗಿದ್ದು, ತಕ್ಷೀರಿಗೆ ಸಂಬಂಧಪಟ್ಟ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಕರಿಗೆ ಕಳುಹಿಸಿಕೊಟ್ಟಿರುತ್ತೇನೆ. ಅವರಿಂದ ದಿನಾಂಕ: 21-5-2009 ರಂದು ಪಡೆದುಕೊಂಡಿರುತ್ತೇನೆ. ಸದರಿ ರಾಸಾಯನಿಕ ವರದಿಯನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ದಿ:23-3-2009 ರಂದು ಪಡೆದುಕೊಂಡಿರುತ್ತೇನೆ. ಸದರಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–2 ಎಂದು ಗುರುತಿಸಿರುತ್ತೇನೆ. ವಾಹನದ ನೋಂದಣಿ ಮಾಲೀಕರಾದ ಶ್ರೀ.ಪದ್ಮನಾಭ ಪೂಜಾರಿ ಇವರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟೀಸನ್ನು ದಿ: 24-3-2009 ರಂದು ನೀಡಲಾಗಿದ್ದು, ಸದರಿ ನೋಟೀಸು ದಿ:1-4-2009 ರಂದು ಜಾರಿಯಾಗಿರುತ್ತದೆ. ಆದರೆ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ. ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ

ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–3 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–3ಎ ಎಂದು ಗುರುತಿಸಲಾಯಿತು. ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ದಿ: 21-7-2009 ರಂದು ಸಲ್ಲಿಸಲಾಗಿದೆ. ಈ ಪ್ರಾಧಿಕಾರದ ಮುಟ್ಟುಗೋಲು ಆದೇಶಾನುಸಾರ ಮದ್ಯವನ್ನು ದಿ:30-6-2009 ರಂದು ನಾಶಪಡಿಸಲಾಗಿದೆ ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರಾದ ಶ್ರೀ.ರತ್ನಾಕರ ರೈ,ಅಬಕಾರಿ ಉಪ ನಿರೀಕ್ಷಕರು(ನಂ.1),ಬಂಟ್ವಾಳ ವಲಯ ಇವರು ದಿ:11-8-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಡಿಸೆಂಬರ್–2008 ರಿಂದ ಮಾರ್ಚ್–2009 ರವರೆಗೆ ಬೆಳ್ತಂಗಡಿ ವಲಯದಲ್ಲಿ ಪ್ರಭಾರ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿನಾಂಕ:21-02-2009 ರಂದು ಸಂಜೆ 5-00 ಗಂಟೆ ಸಮಯದಲ್ಲಿ ತನ್ನ ಸಿಬ್ಬಂದಿಯವರೊಂದಿಗೆ ಬೆಳ್ತಂಗಡಿ ತಾಲೂಕು ನಾವೂರು ಇಂದಬೆಟ್ಟು ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ, ನಾವೂರಿನಿಂದ ಇಂದಬೆಟ್ಟು ಕಡೆಗೆ ಹೋಗುತ್ತಿದ್ದ ಮೋಟಾರು ಸೈಕಲ್‌ನ ಪೆಟ್ರೋಲ್ ಟ್ಯಾಂಕ್‌ನ ಮೇಲೆ ಪ್ಲಾಸ್ಟಿಕ್ ಗೋಣಿ ಚೀಲದ ಕಟ್ಟು ಒಂದು ಇರುವುದು ಕಂಡು ಬಂತು. ಅನುಮಾನದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ, ಬೈಕ್ ಸವಾರನು ಮೋಟಾರು ಸೈಕಲನ್ನು ಅತೀ ವೇಗವಾಗಿ ಚಲಾಯಿಸಿಕೊಂಡು ಹೋಗಲು ಯತ್ನಿಸಿದಾಗ, ಆತನನ್ನು ಬೆನ್ನಟ್ಟಿ ಒಂದೆರಡು ಕಿ.ಮೀ.ಗಳಷ್ಟು ದೂರ ಹೋದ ನಂತರ ಸದರಿ ಸವಾರನು ಪ್ಲಾಸ್ಟಿಕ್ ಚೀಲದ ಕಟ್ಟನ್ನು ಮಾರ್ಗದ ಬದಿಗೆ ಎಸೆದು ಬೈಕನ್ನು ಮಾರ್ಗದ ಬದಿಯಲ್ಲಿ ಬಿಟ್ಟು ಪಕ್ಕದ ಗುಡ್ಡದಲ್ಲಿ ಪರಾರಿಯಾಗಿರುತ್ತಾನೆ. ಓಡಿ ಹೋದ ಆರೋಪಿಯು ಕೃಷ್ಣಪ್ಪ ಪೂಜಾರಿ ಎಂದು ತಿಳಿದು ಬಂದಿರುತ್ತದೆ. ಸದರಿ ಬೈಕ್ ಹಾಗೂ ಆರೋಪಿಯು ಎಸೆದಿರುವ ಕಟ್ಟನ್ನು ಶೋಧಿಸಬೇಕಾಗಿರುವುದರಿಂದ, ಮಾನ್ಯ ಘನ ನ್ಯಾಯಾಲಯದಿಂದ ಶೋಧನಾ ವಾರಂಟ್ ತರಲು ಸಮಯಾವಕಾಶವಿಲ್ಲದಿದ್ದುದರಿಂದ, ಸದರಿ ಕಾರಣವನ್ನು ಸ್ಥಳದಲ್ಲಿಯೇ ದಾಖಲಿಸಿಕೊಂಡು ಶೋಧನೆ ಸಮಯದಲ್ಲಿ ಪಂಚರನ್ನು ಹುಡುಕಲಾಗಿ, ಯಾರೂ ಸಿಗದ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರಾಗಿರಿಸಿಕೊಂಡು ಶೋಧನೆ ನಡೆಸಲಾಯಿತು. ಪ್ಲಾಸ್ಟಿಕ್ ಚೀಲವನ್ನು ಪರಿಶೀಲಿಸಿದಾಗ, ಅದರಲ್ಲಿ 180 ಎಂ.ಎಲ್.ನ ಮದ್ಯದ ಬಾಟಲ್‌ಗಳು ಹಾಗೂ ಒಡೆದ ಬಾಟಲ್‌ಗಳು ಪತ್ತೆಯಾದವು. ಅವುಗಳನ್ನು ಎಣಿಸಿ ನೋಡಲಾಗಿ, ಹೈವೆ ಫೈನ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 180 ಎಂ.ಎಲ್.ನ 32 ಸೀಸೆಗಳು ಹಾಗೂ ಒಡೆದು ಹೋದ 180 ಎಂ.ಎಲ್.ನ 16 ಬಾಟಲ್‌ಗಳು ಪತ್ತೆಯಾದವು. ಸದರಿ ಮೋಟಾರು ಬೈಕನ್ನು ಪರಿಶೀಲಿಸಲಾಗಿ, ಅದು ಬಜಾಜ್ ಕವಾಸಕಿ ಆಗಿದ್ದು, ಇದರ ನೋಂದಣಿ ಸಂಖ್ಯೆ: ಕೆಎ–19–ಕ್ಯೂ–2432 ಆಗಿದ್ದು, ಇದರ ಚಾಸೀಸ್ ಸಂಖ್ಯೆ:ಡಿಎಫ್‌ಎಫ್‌ಬಿಹೆಚ್‌ಎಲ್ 22569 ಆಗಿರುತ್ತದೆ. ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ಎರಡು ಬಾಟಲ್‌ಗಳನ್ನು ತೆಗೆದು, ಅವುಗಳಿಗೆ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು ಹಾಗೂ ಸ್ಥಳದಲ್ಲಿಯೇ ಮಾದರಿ ಮೊಹರು ತಯಾರಿಸಲಾಯಿತು. ಸದರಿ ವಾಹನದಲ್ಲಿ ಯಾವುದೇ ರಹದಾರಿ ಅಥವಾ ಬಿಲ್ಲುಗಳು ದೊರಕದ ಕಾರಣ, ಇದು ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದರಿಂದ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಎಲ್ಲಾ ಸೊತ್ತುಗಳನ್ನು ಕಚೇರಿಗೆ ತಂದು, ಕಚೇರಿಯಲ್ಲಿ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಲಾಯಿತು. ಸದರಿ ವರದಿ ಬೆಳ್ತಂಗಡಿ ವಲಯ ಅಬಕಾರಿ ಉಪ ನಿರೀಕ್ಷಕರು(ನಂ.2) ಇವರ ಪ್ರಥಮ ಮಾಹಿತಿ ವರದಿ ಸಂ:6/2008-09 ದಿ:21-2-2009 ಆಗಿರುತ್ತದೆ. ತದನಂತರ ದಿ:4-3-2009 ರಂದು ಜಪ್ತಾದ ವಾಹನದ ಬಿ ವಹಿಯನ್ನು ಕೋರಿ ಮಂಗಳೂರು ಸಾರಿಗೆ ಅಧಿಕಾರಿಯವರಿಗೆ ಪತ್ರ ಬರೆಯಲಾಗಿದೆ. ನಂತರ ಕಡತವನ್ನು ಶ್ರೀಮತಿ.ಸೌಮ್ಯಲತ, ಅಬಕಾರಿ ಉಪ ನಿರೀಕ್ಷಕರು ಇವರಿಗೆ ಹಸ್ತಾಂತರಿಸಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಅದನ್ನು ನಿಶಾನೆ ಪಿ–4 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–4ಎ ಎಂದು, ಮಹಜರನ್ನು ನಿಶಾನೆ ಪಿ–5 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–5ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:21-2-2009 ರಂದು ಜಪ್ತುಪಡಿಸಿಕೊಂಡಿರುವ ಬಜಾಜ್ ಕವಾಸಕಿ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಕ್ಯೂ–2432 ರಲ್ಲಿ ಅಕ್ರಮವಾಗಿ 5-760 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ, ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ

ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965 ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ,ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಯು ಅಕ್ರಮವಾಗಿ 5-760 ಲೀಟರ್ ಮದ್ಯವನ್ನು ಸಾಗಾಣಿಕೆ ಮಾಡುವಾಗ, ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14, 32 ಮತ್ತು 38ಎ ರ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಕವಾಸಕಿ ಮೋಟಾರು ಸೈಕಲ್ ಸಂಖ್ಯೆ: ಕೆಎ–19-ಕ್ಯೂ-2432 ನ್ನು ವಶಪಡಿಸಿಕೊಂಡು ಸುಮಾರು 6 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಬೆಳ್ತಂಗಡಿ ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಹಾಗೂ ಆರೋಪಿಯು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಪ್ರಾಧಿಕಾರದಿಂದ ನೀಡಲಾಗಿರುವ ಕಾರಣ ಕೇಳಿ ನೋಟೀಸಿಗೆ ಅನುಗುಣವಾಗಿ ಶ್ರೀ.ಪದ್ಮನಾಭ ಪೂಜಾರಿ ಇವರು ದಿ:1-7-2009 ರಂದು ಸಲ್ಲಿಸಿದ ಉತ್ತರದಲ್ಲಿ, ತನ್ನ ವಾಹನವನ್ನು 3 ವರ್ಷದ ಮೊದಲೇ ಆರೋಪಿಯಾದ ಕೃಷ್ಣಪ್ಪ ಪೂಜಾರಿ ಇವರಿಗೆ ಹಸ್ತಾಂತರಿಸಿರುತ್ತೇನೆ. ಫಾರಂ–29 ಮತ್ತು 30 ಕ್ಕೆ ಸಹಿ ಮಾಡಿಕೊಂಡಿರುತ್ತೇನೆ ಎಂದು ತಿಳಿಸಿರುತ್ತಾರೆ. ಆದರೆ ಅಧಿಕೃತ ದಾಖಲಾತಿಗಳು ಹಾಜರುಪಡಿಸಿರುವುದಿಲ್ಲ. ಆದುದರಿಂದ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ಆರೋಪಿಯಾದ ಕೃಷ್ಣಪ್ಪ ಪೂಜಾರಿ ಇವರಿಗೆ ನೀಡಿದ ಕಾರಣ ಕೇಳಿ ನೋಟೀಸು ಮತ್ತು ಹಾಜರಾತಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು ಅದು ಸ್ವೀಕೃತಿಯಾಗಿದ್ದರೂ, ಅವರು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ಸದರಿ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಉಪಯೋಗವಾಗಿರುವುದಿಲ್ಲವೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸಿರುವುದಿಲ್ಲ. ಆದುದರಿಂದ ವಾಹನ ಮಾಲೀಕರೇ ಸ್ವತ: ತನ್ನ ಮೋಟಾರು ಸೈಕಲ್‌ನಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವು ಈಗಾಗಲೇ 6 ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಬಾಕ್ಸರ್ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಕ್ಯೂ–2432 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/262/ಡಿಟಿಸಿಆರ್/2008–09 ದಿನಾಂಕ:17ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತಕ್ಷೀರು ಸಂ: 6/2008-09 ದಿ:21-2-2009 ರಲ್ಲಿ ಜಪ್ತುಪಡಿಸಿರುವ ಬಜಾಜ್ ಬಾಕ್ಸರ್ ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಕ್ಯೂ–2432 ನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:17-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ–1:** ಶ್ರೀಮತಿ.ಎನ್.ಸೌಮ್ಯಲತ, ಅಬಕಾರಿ ಉಪ ನಿರೀಕ್ಷಕರು(ನಂ.2), ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ಪ್ರಾ.ಸಾ–2:** ಶ್ರೀರತ್ನಾಕರ ರೈ, ಅಬಕಾರಿ ಉಪ ನಿರೀಕ್ಷಕರು(ನಂ.1),ಬಂಟ್ವಾಳ ವಲಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ರಾಸಾಯನಿಕ ವಿಶ್ಲೇಷಣಾ ವರದಿ.
ನಿಶಾನೆ ಪಿ–2 : ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–3 : ತನಿಖಾ ವರದಿ.
ನಿಶಾನೆ ಪಿ–3ಎ : ತನಿಖಾ ವರದಿಯಲ್ಲಿರುವ ತನಿಖಾಧಿಕಾರಿಯವರ ಸಹಿ.
ನಿಶಾನೆ ಪಿ–4 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–4ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ
ನಿಶಾನೆ ಪಿ–5 : ಮಹಜರು
ನಿಶಾನೆ ಪಿ–5ಎ: ಮಹಜರಿನಲ್ಲಿ ಫಿರ್ಯಾದುದಾರರ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.935

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/232/ಡಿಟಿಸಿಆರ್/2006–07 ದಿನಾಂಕ: 25ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಬಂಟ್ವಾಳ ನಗರ ಪೊಲೀಸ್ ಠಾಣೆ,
ಬಂಟ್ವಾಳ.

**ಆರೋಪಿ:**
ಪತ್ತೆಯಾಗಿರುವುದಿಲ್ಲ.

**ವಾಹನ ಮಾಲೀಕರು:**
1) ಖಾದರ್, ಬಿನ್: ಇಬ್ರಾಹಿಂ,
ವಾಸ: ಕಟ್ಟಡ ಸಂ:1-121, ನೀರಪಾಲ್ಕೆ, ಬಂಟ್ವಾಳ.
2) ಮೆ: ಶ್ರೀರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸ್ ಕಂಪೆನಿ ಲಿ.,ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್,
ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:27-04-2006 ರಂದು ಫಿರ್ಯಾದುದಾರರು ಅವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯೊಂದಿಗೆ ಬಂಟ್ವಾಳ ತಾಲೂಕಿನ ಗೋಳ್ತಮಜಲು ಗ್ರಾಮದ ಕಲ್ಲಡ್ಕ ಜಂಕ್ಷನ್‌ನಲ್ಲಿ ತನ್ನ ಇಲಾಖಾ ವಾಹನದಲ್ಲಿ ಬೆಳಗ್ಗಿನ ಜಾವ ಸುಮಾರು 2-00 ಗಂಟೆ ಸಮಯದಲ್ಲಿ ರಸ್ತೆ ಕಾವಲು ನಡೆಸುತ್ತಿರುವಾಗ, ರಾಷ್ಟ್ರೀಯ ಹೆದ್ದಾರಿ 48 ರ ರಸ್ತೆಯ ಕಲ್ಲಡ್ಕ ಜಂಕ್ಷನ್ ಕಡೆಗೆ ಜೀಪು ಅತೀ ವೇಗವಾಗಿ ಬರುತ್ತಿದ್ದು, ಕಲ್ಲಡ್ಕ ಜಂಕ್ಷನ್‌ನಲ್ಲಿ ಕೇರಳ ಕಡೆಗೆ ಹೋಗಲು ವಿಟ್ಲ ರಸ್ತೆಯ ಕಡೆ ಚಲಾಯಿಸಿಕೊಂಡು ಹೋಗುತ್ತಿರುವುದನ್ನು ತಡೆದು ನಿಲ್ಲಿಸಿದಾಗ, ಸದರಿ ಜೀಪಿನ ಚಾಲಕ ಜೀಪನ್ನು ಮಾರ್ಗದ ಮಧ್ಯದಲ್ಲಿ ನಿಲ್ಲಿಸಿ ಓಡಿ ಪರಾರಿಯಾಗಿರುತ್ತಾನೆ. ಚಾಲಕನನ್ನು ಹಿಡಿಯಲು ಪ್ರಯತ್ನಿಸಿದರೂ ಆತನು ಕತ್ತಲೆಯಲ್ಲಿ ಕಣ್ಮರೆಯಾಗಿರುತ್ತಾನೆ. ನಂತರ ಸದರಿ ಜೀಪನ್ನು ಪರಿಶೀಲಿಸಿದಾಗ, ಅದರಲ್ಲಿ 3 ಗೋಣಿ ಚೀಲಗಳಿದ್ದು, ಗೋಣಿ ಚೀಲಗಳಲ್ಲಿ ಸಾರಾಯಿ ಸ್ಯಾಚೆಟ್‌ಗಳನ್ನು ತುಂಬಿಸಿಕೊಂಡು ಸಾಗಾಟ ಮಾಡುತ್ತಿರುವುದು ಪತ್ತೆಯಾಯಿತು. ಸದರಿ 3 ಗೋಣಿ ಚೀಲಗಳನ್ನು ಪರಿಶೀಲಿಸಿದಾಗ, ಪ್ರತಿ ಗೋಣಿ ಚೀಲದಲ್ಲಿ 100 ಎಂ.ಎಲ್.ನ 400 ಸಾರಾಯಿ ಸ್ಯಾಚೆಟ್‌ಗಳಂತೆ ಒಟ್ಟು 1,200 ಸಾರಾಯಿ ಸ್ಯಾಚೆಟ್‌ಗಳಿರುವುದು ಪತ್ತೆಯಾದವು. ಸದರಿ ಗೋಣಿ ಚೀಲಗಳಿಂದ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಅದನ್ನು ಬಿಳಿ ಬಟ್ಟೆಯಿಂದ ಕಟ್ಟಿ ಅರಗು ಸೀಲ್ ಹಾಕಿ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಅಕ್ರಮವಾಗಿ ಸಾಗಾಟಕ್ಕೆ ಬಳಸಿದ ಜೀಪನ್ನು ಪರಿಶೀಲಿಸಿದಾಗ, ಇದು ಮಹೇಂದ್ರ ಕಂಪೆನಿಯ ತಯಾರಿಕಾ ಜೀಪು ನೋಂದಣಿ ಸಂಖ್ಯೆ: ಕೆಎ–22–ಎಂ–3339 ಆಗಿರುತ್ತದೆ. ಆರೋಪಿಯು ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಕೇರಳ ರಾಜ್ಯಕ್ಕೆ ಸಾಗಾಟ ಮಾಡುವುದನ್ನು ಖಚಿತಪಡಿಸಿಕೊಂಡು ಹಾಗೂ ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 13,14,32,34,43(1)(2) ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸ್ಥಳ ಮಹಜರನ್ನು ಸ್ಥಳದಲ್ಲಿಯೇ ಬರೆದು, ಜೀಪು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಓಡಿ ಹೋದ ಆರೋಪಿಯ ವಿರುದ್ದ ತಕ್ಷೀರು ಸಂ: 83/2006 ದಿ:27-04-2006 ರಂತೆ ಪ್ರಕರಣವನ್ನು ನೋಂದಾಯಿಸಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಂದಿನ ತನಿಖೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಬಂಟ್ವಾಳ ಇವರಿಗೆ ದಿನಾಂಕ:17-2-2007 ರಂದು ಕಡತ ಹಾಗೂ ಸೊತ್ತುಗಳೊಂದಿಗೆ ಹಸ್ತಾಂತರಿಸಿರುತ್ತಾರೆ.

ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಬಂಟ್ವಾಳ ಇವರ ತನಿಖಾ ವರದಿ ಸಂ:ಸಿಆರ್‌ಎಂ/26/2006-07 ದಿ:21-3-2007 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–74-30 ದಿ:9-3-2007 ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.24 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ಸಂಬಂಧಪಟ್ಟ ಸಾರಿಗೆ ಅಧಿಕಾರಿಯಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪಿನ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಪಡೆಯಲಾಗಿದ್ದು, ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಖಾದರ್, ಬಿನ್: ಇಬ್ರಾಹಿಂ, ವಾಸ: ಕಟ್ಟಡ ಸಂ:1-121, ನೀರಪಾಲ್ಕೆ, ಬಂಟ್ವಾಳ ಮತ್ತು ಹೆಚ್.ಪಿ.ಎ.ದಾರರಾದ ಮೆ: ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ ಲಿ., ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಎಂದು ದೃಢೀಕರಿಸಿ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಅಕ್ರಮ ಸಾಗಾಟಕ್ಕೆ ಬಳಸಿದ ಜೀಪನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸ್ಯಾಚೆಟ್‌ಗಳನ್ನು ನಾಶಪಡಿಸಲು ಹಾಗೂ ಜೀಪನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ತನ್ನ ತನಿಖಾ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ಮುಟ್ಟುಗೋಲು ಆದೇಶ ಸಂಖ್ಯೆ: ಇ.ಐ.ಬಿ/ಡಿಟಿಸಿಆರ್/232/ 2006-07 ದಿ:13-4-2007 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 100 ಎಂ.ಎಲ್.ನ 1200 ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸ್ಯಾಚೆಟ್‌ಗಳನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಸಾರಿಗೆ ಅಧಿಕಾರಿಗಳು ಸಲ್ಲಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಖಾದರ್, ಬಿನ್: ಇಬ್ರಾಹಿಂ, ವಾಸ: ಕಟ್ಟಡ ಸಂ:1-121, ನೀರಪಾಲ್ಕೆ, ಬಂಟ್ವಾಳ ಮತ್ತು ಹೆಚ್.ಪಿ.ಎ.ದಾರರಾದ ಮೆ: ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ ಲಿ.,ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿ: 24-4-2007 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಸೆಕ್ಷನ್ 43ಬಿ ಪ್ರಕಾರ

ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಹೆಚ್.ಪಿ.ಎ.ದಾರರಿಗೆ ನೀಡಿರುವ ನೋಟೀಸು ದಿ: 27-4-2007 ರಂದು ಸ್ವೀಕೃತಿಯಾಗಿ, ಸ್ವೀಕೃತ ರಶೀದಿ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ ಹಾಗೂ ವಾಹನದ ಮಾಲೀಕರಿಗೆ ನೀಡಿರುವ ನೋಟೀಸು ಜಾರಿಯಾಗದೆ ಹಿಂದೆ ಬಂದಿರುತ್ತದೆ.

ಮೆ: ಶ್ರೀರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸ್ ಕಂಪೆನಿ ಲಿ.,ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಇವರು ತನ್ನ ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ದಿ:18-5-2007 ರಂದು ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ: ಕೆಎ–22–ಎಂ–3339 ಕ್ಕೆ ಅವರ ಸಂಸ್ಥೆಯಿಂದ ಧನ ಸಾಲವನ್ನು ನೀಡಿದ್ದು, ವಾಹನ ಮಾಲೀಕ ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮವಾಗಿ ಸಾಗಾಟ ಮಾಡಿರುವುದು ತನಗೆ ಗೊತ್ತಿರುವುದಿಲ್ಲ. ಜೀಪಿಗೆ ನೀಡಿರುವ ಧನ ಸಾಲದ ಬಾಕಿ ಬಾಬ್ತನ್ನು ವಾಹನ ಮಾಲೀಕನು ತಮಗೆ ಪಾವತಿಸಲು ಇನ್ನೂ ಬಾಕಿಯಿದ್ದು, ಸದರಿ ವಾಹನವನ್ನು ತನಗೆ ಬಿಡುಗಡೆಗೊಳಿಸಬೇಕೆಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಅಕ್ರಮವಾಗಿ ಸಾಗಾಟಕ್ಕೆ ಬಳಸಿದ ಜೀಪು ಸಂಖ್ಯೆ: ಕೆಎ–22–ಎಂ–3339 ರ ಮುಟ್ಟುಗೋಲು ನಡವಳಿಗೆ ಸಂಬಂಧಿಸಿ ಸಾಕ್ಷಿ ವಿಚಾರಣೆಯಾಗಿ ಸಂಬಂಧಪಟ್ಟ ಸಾಕ್ಷಿದಾರರಿಗೂ ಹಾಗೂ ವಾಹನದ ಮಾಲೀಕರು ಮತ್ತು ಹೆಚ್.ಪಿ.ಎ.ದಾರರಿಗೆ ಹಾಜರಾತಿ ನೋಟೀಸನ್ನು ಈ ಪ್ರಾಧಿಕಾರದಿಂದ ನೀಡಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ, ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿ: 27-04-2006 ರಂದು ಜೀಪು ಸಂಖ್ಯೆ: ಕೆಎ–22–ಎಂ–3339 ರಲ್ಲಿ ಅಕ್ರಮವಾಗಿ 100 ಎಂ.ಎಲ್.ನ 1200 ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಸ್ಯಾಚೆಟ್‌ಗಳನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀಮತಿ.ಶೋಭಾ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಬಂಟ್ವಾಳ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿ:14-6-2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ತಕ್ಷೀರಿಗೆ ಸಂಬಂಧಿಸಿದ ಸೊತ್ತುಗಳನ್ನು ಹಾಗೂ ಕಡತವನ್ನು ದಿ: 17-2-2007 ರಂದು ಬಂಟ್ವಾಳ ನಗರ ಪೊಲೀಸ್ ಠಾಣೆಯ ಅಧಿಕಾರಿಯವರಿಂದ ಪಡೆದುಕೊಂಡಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–1 ಎಂದು, ಮಹಜರನ್ನು ನಿಶಾನೆ ಪಿ–2 ಎಂದು, ರಾಸಾಯನಿಕ ವಿಶ್ಲೇಷಕರ ವರದಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ದಿ:19-2-2007 ರಂದು ತಕ್ಷೀರಿಗೆ ಸಂಬಂಧಿಸಿದ ವಾಹನದ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಪತ್ರ ವ್ಯವಹಾರ ಮಾಡಲಾಗಿದ್ದು, ಸದರಿ ಕಚೇರಿಯಿಂದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಪಡೆದಿದ್ದು, ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮೂಲಕ ಖಾದರ್ ಎಂಬುವುದಾಗಿ ತಿಳಿದು ಬಂದಿರುತ್ತದೆ. ಈ ಬಗ್ಗೆ ತನಿಖಾ ವರದಿಯನ್ನು ಅಬಕಾರಿ ಅಧೀಕ್ಷಕರು, ಮಂಗಳೂರು ಇವರಿಗೆ ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರಾದ ಮೆ: ಶ್ರೀರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸ್ ಕಂಪೆನಿ ಲಿ.,ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಇವರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ವಾಹನದ ಮಾಲೀಕರ ಪರ ತನಿಖೆಯನ್ನು ಪೂರ್ಣಗೊಳಿಸಿ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ಮೆ: ಶ್ರೀರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸ್ ಕಂಪೆನಿ ಲಿ., ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಎಂದು ನಮೂದಿಸಲಾಗಿದೆ ಎಂದರೆ ಸರಿ. ನಿಶಾನೆ ಪಿ–4 ನ್ನು ಸುಳ್ಳು ವರದಿ ಎಂದು ಹೇಳುವುದು ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ತನಿಖಾಧಿಕಾರಿಯವರು ಸಲ್ಲಿಸಿದ ಹೇಳಿಕೆಗಳು ದಾಖಲಿಸಿದ ತಕ್ಷೀರಿಗೆ ಒಂದಕ್ಕೊಂದು ತಾಳೆಯಾಗಿದ್ದು, ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

ಸಾಕ್ಷಿದಾರರು ನೀಡಿರುವ ಹೇಳಿಕೆಗಳು ದಾಖಲಿಸಿದ ತಕ್ಷೀರಿಗೆ ಸಂಬಂಧಿಸಿ ಮಹಜರಿಗೆ ಒಂದಕ್ಕೊಂದು ಪೂರಕವಾಗಿದ್ದು, ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯಿಂದ ಸದ್ರಿ ಅಪರಾಧ ನಡೆದಿರುವುದು ಈ ಪ್ರಾಧಿಕಾರಕ್ಕೆ ಮನದಟ್ಟಾಗಿದೆ. ಆದುದರಿಂದ ಜಪ್ತುಪಡಿಸಿರುವ ವಾಹನದಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೆ ವಾಹನ ಮಾಲೀಕನು ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ದಾಸ್ತಾನು ಹೊಂದಿ ಜೀಪಿನಲ್ಲಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಸಾಬೀತುಪಡಿಸಬೇಕಾಗಿದ್ದು, ವಾಹನ ಮಾಲೀಕರು ಇದುವರೆಗೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಹೆಚ್.ಪಿ.ಎ.ದಾರರಿಗೆ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ಮತ್ತು ಪ್ರತಿರಕ್ಷೆ ಸಾಕ್ಷಿಗಳನ್ನು ಹಾಜರುಪಡಿಸಲು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸುಗಳನ್ನು ಅರ್ಜಿದಾರರು ಹಾಗೂ ಅವರ ಪರ ವಕೀಲರು ಸ್ವೀಕರಿಸಿದರೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ವಿಚಾರಣೆಗಾಗಿ ಹಾಜರಾಗಿರುವುದಿಲ್ಲ. ವಾಹನದ ಮಾಲೀಕರಿಗೆ ಹಲವಾರು ಬಾರಿ ಕಾಲಾವಕಾಶ ನೀಡಲಾಗಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಲು ಹಾಜರಾಗದಿರುವುದನ್ನು ಗಮನಿಸಿದಾಗ, ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳ ಸಾಗಾಣಿಕೆಗೆ ತೊಡಗಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ ಹಾಗೂ ವಾಹನದ ಹೆಚ್‌ಪಿ.ಎ. ಹೊಂದಿರುವ ಮೆ: ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ ಲಿ., ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಇವರು ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ಸ್ವೀಕರಿಸಿದ್ದು, ಇದಕ್ಕೆ ಉತ್ತರವಾಗಿ ದಿ: 18-5-2007 ರಂದು ಸದರಿ ವಾಹನವನ್ನು ತನ್ನ ಪರ ಬಿಡುಗಡೆಗೊಳಿಸಲು ಅರ್ಜಿ ಸಲ್ಲಿಸಿರುತ್ತಾರೆ. ಆದರೆ ಇವರು ಸದರಿ ವಾಹನದ ಹೆಚ್.ಪಿ.ಎ.ದಾರರಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಆರ್.ಸಿ. ಮಾಲೀಕರ ಪರ ಬಂಡವಾಳ ಒದಗಿಸಿದ್ದು, ಸದರಿ ಆರ್.ಸಿ. ಮಾಲೀಕರಿಂದ ಅವರಿಗೆ ಸಾಲದ ಬಾಬ್ತು ಪಾವತಿಗೆ ಬಾಕಿಯಿರುವುದಾಗಿ ತಿಳಿಸಿರುತ್ತಾರೆ. ಆದರೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ(2) ರಂತೆ ವಾಹನವನ್ನು ಅಕ್ರಮ ಸೊತ್ತುಗಳ ಸಾಗಾಣಿಕೆ ಬಳಸದೇ ಇರುವ ಬಗ್ಗೆ ಅವರು ತೋರಿಸಿರುವ ಯಾವುದೇ ಷರತ್ತುಗಳ ಮಾಹಿತಿ ಮತ್ತು ಸದರಿ ವಾಹನವನ್ನು ಅವರು ಆಗಾಗ್ಗೆ ಮರುಪರಿಶೀಲನೆಗೊಳಪಡಿಸಿ, ಸದರಿ ವಾಹನವನ್ನು ಯಾವುದೇ ಅಕ್ರಮ ಸೊತ್ತುಗಳ ಸಾಗಾಣಿಕೆ ಬಗ್ಗೆ ಉಪಯೋಗಿಸದಿರುವ ಕುರಿತು ದೃಢೀಕರಣಗೊಳ್ಳದಿರುವುದರಿಂದ, ಅವರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಬಹುದಾಗಿದೆ. ಸದರಿ ವಾಹನವು ಜಪ್ತಾಗಿ ಈಗಾಗಲೇ ಸುಮಾರು 3 ವರ್ಷ 5 ತಿಂಗಳು ಕಳೆದಿದ್ದು, ಸದರಿ ಅವಧಿಯಲ್ಲಿ ವಾಹನದ ಮೂಲ ಆರ್.ಸಿ. ಮಾಲೀಕ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ವಾಹನ ಮಾಲೀಕರ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಹಾಗೂ ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಜೀಪ್ ಸಂಖ್ಯೆ: ಕೆಎ–22–ಎಂ–3339 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/232/ಡಿಟಿಸಿಆರ್/2006–07 ದಿನಾಂಕ: 25ನೇ ಸೆಪ್ಟೆಂಬರ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರ ತಕ್ಷೀರು ಸಂ: 83/2006 ದಿ:27-04-2006 ರಲ್ಲಿ ಜಪ್ತುಪಡಿಸಿರುವ ವಾಹನ ಜೀಪ್ ಸಂಖ್ಯೆ:ಕೆಎ–22–ಎಂ–3339 ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನದ ಮಾಲೀಕರು ಸದ್ರಿ ವಾಹನವನ್ನು ತನ್ನ ತಿಳುವಳಿಕೆಯಿಂದಲೇ ಅಕ್ರಮವಾಗಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲಾಗಿರುವುದು. ಅವರು ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರೀತ್ಯಾ ನೀಡಲಾದ ನೋಟೀಸನ್ನು ಸ್ವೀಕರಿಸದೆ ಹಾಗೂ ಪ್ರಾಧಿಕಾರದ ಮುಂದೆ ಅವರ ವಿರುದ್ಧ ಇರುವ ಆರೋಪವನ್ನು ಅಲ್ಲಗಳೆಯುವ ಬಗ್ಗೆ ಯಾವುದೇ ಪ್ರಯತ್ನ ಮಾಡದೆ ಹಾಗೂ ತತ್ಸಂಬಂಧ ಯಾವುದೇ ಪುರಾವೆಗಳನ್ನು ನೀಡಲು ವಿಫಲರಾಗಿರುವ ಕಾರಣ, ಅವರ ತಿಳುವಳಿಕೆಯಿಂದಲೇ ಈ ಅಪರಾಧವನ್ನು ಎಸಗಿರುವುದರಿಂದ, ವಾಹನದ ಮಧ್ಯಂತರ

ಬಿಡುಗಡೆಗೆ ಆಸ್ಪದ ಇರುವುದಿಲ್ಲ. ಕಾರಣ ಸದ್ರಿ ವಾಹನದ ಫೈನಾನ್ಸ್ ಸಂಸ್ಥೆಯಾದ ಮೆ: ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ ಲಿ., ಪ್ಯಾರಡಿ ಜಿಮ್ ಪ್ಲಾಸಾ, ಎ.ಬಿ.ಶೆಟ್ಟಿ ಸರ್ಕಲ್, ಮಂಗಳೂರು ಇವರು ಮಧ್ಯಂತರ ಬಿಡುಗಡೆಗೆ ಈ ಪ್ರಾಧಿಕಾರದಲ್ಲಿ ಒಪ್ಪಿಸಿದ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:25-09-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀಮತಿ.ಶೋಭಾ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಬಂಟ್ವಾಳ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

| | | |
|---|---|---|
| ನಿಶಾನೆ ಪಿ–1 | : | ಪ್ರಥಮ ಮಾಹಿತಿ ವರದಿ ಪ್ರತಿ |
| ನಿಶಾನೆ ಪಿ–2 | : | ಮಹಜರು ಪ್ರತಿ |
| ನಿಶಾನೆ ಪಿ–3 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–4 | : | ತನಿಖಾ ವರದಿ |

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:–

–ಇಲ್ಲ–

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1027

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/30/ಡಿಟಿಸಿಆರ್/2004–05 ದಿನಾಂಕ:29ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಪಿರ್ಯಾದುದಾರರು:** | **ಆರೋಪಿ ಹಾಗೂ ವಾಹನ ಮಾಲೀಕರು:** |
|---|---|
| ಅಬಕಾರಿ ಉಪ ನಿರೀಕ್ಷಕರು, | ಡಿ.ಜಯರಾಮ ಶೆಟ್ಟಿ, |
| ಬಂಟ್ವಾಳ ಉಪ ವಲಯ, | ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, |
| ಬಂಟ್ವಾಳ. | ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10-08-2004 ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿಯೊಂದಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಬಂಟ್ವಾಳ ತಾಲೂಕಿನ ವಾಮದಪದವು ಮುಖಾಂತರ ಬೆಳ್ತಂಗಡಿ ತಾಲೂಕಿಗೆ ಅಕ್ರಮ ಮದ್ಯ ಸರಬರಾಜು ಆಗುತ್ತಿದೆ ಎಂಬ ವರ್ತಮಾನದ ಮೇರೆಗೆ ಖಾಸಗಿ ವಾಹನದಲ್ಲಿ ರಾತ್ರಿ 10-00 ಗಂಟೆಗೆ ಸದರಿ ಸ್ಥಳಕ್ಕೆ ಹೋದಾಗ, ಒಬ್ಬ ವ್ಯಕ್ತಿಯು ಕಪ್ಪು ಬಣ್ಣದ ಬಜಾಜ್ ಬಾಕ್ಸರ್ ಮೋಟಾರು ಬೈಕ್ ಸಂಖ್ಯೆ: ಕೆಎ–19–ಎಸ್–878 ನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ಅನುಮಾನದ ರೀತಿಯಲ್ಲಿ ವರ್ತಿಸುತ್ತಿರುವುದನ್ನು ಕಂಡು ಕೂಡಲೇ ಸದರಿ ವ್ಯಕ್ತಿಯ ಬಳಿ ಧಾವಿಸಿ ಬೈಕನ್ನು

ಪರಿಶೀಲಿಸಿದಾಗ, ಸದರಿ ಬೈಕಿನ ಪೆಟ್ರೋಲ್ ಟ್ಯಾಂಕ್‌ನ ಮೇಲೆ ಎರಡು ಪ್ಲಾಸ್ಟಿಕ್ ಗೋಣಿ ಚೀಲದ ಕಟ್ಟುಗಳು ಇರುವುದು ಕಂಡು ಬಂತು. ಅನುಮಾನದ ಮೇರೆಗೆ ಗೋಣಿ ಚೀಲವನ್ನು ಪರಿಶೀಲಿಸಿದಾಗ, ಪ್ರತಿಯೊಂದು ಗೋಣಿ ಚೀಲದಲ್ಲಿ ತಲಾ 12 ರಂತೆ ಒಟ್ಟು 24 ಬಾಟಲ್‌ಗಳು 750 ಎಂ.ಎಲ್.ನ ಕೊಲಂಬಿಯ ವಿಸ್ಕಿ ಎಂದು ಲೇಬಲ್ ಹಚ್ಚಿರುವ ಮದ್ಯದ ಬಾಟಲ್‌ಗಳು ಇರುವುದು ಕಂಡು ಬಂತು. ಸದರಿ ಮದ್ಯದ ಬಾಟಲ್‌ಗಳನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ಪ್ರಶ್ನಿಸಿದಾಗ, ತನ್ನಲ್ಲಿ ಯಾವುದೂ ಇಲ್ಲವೆಂದು ತಿಳಿಸಿರುತ್ತಾನೆ. ಸದರಿ ವ್ಯಕ್ತಿಯ ವಿಳಾಸವನ್ನು ವಿಚಾರಿಸಿದಾಗ ತನ್ನ ಹೆಸರು ಡಿ.ಜಯರಾಮ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ಎಂದು ತಿಳಿಸಿರುತ್ತಾನೆ. ಸದರಿ ಮದ್ಯದ ಬಾಟಲ್‌ಗಳನ್ನು ತಾನು ಬೆಳ್ತಂಗಡಿಗೆ ಮಾರಾಟ ಮಾಡಲೆಂದು ಸಾಗಿಸುತ್ತಿರುವುದಾಗಿ ತಿಳಿಸಿರುವ ಮೇರೆಗೆ, ಸಾಕ್ಷಿಗಾಗಿ ರಾತ್ರಿ ವೇಳೆಯಾಗಿರುವುದರಿಂದ ಆಸುಪಾಸಿನಲ್ಲಿ ಯಾರೂ ದೊರಕದ ಕಾರಣ ಸಿಬ್ಬಂದಿಯವರನ್ನೇ ಸಾಕ್ಷಿಯನ್ನಾಗಿರಿಸಿ, ಸದರಿ ಮದ್ಯದ ಬಾಟಲ್‌ಗಳಿಂದ ಎರಡು ಬಾಟಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಪ್ರತ್ಯೇಕಿಸಿ ಮುಚ್ಚಳವನ್ನು ಬಟ್ಟೆದಾರದಿಂದ ಕಟ್ಟಿ ಇಲಾಖಾ ಮೊಹರು ಹಾಗೂ ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು ಹಾಗೂ ಆರೋಪಿಯ ಹೆಸರು ಮತ್ತು ವಿಳಾಸವಿರುವ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 34, 38(ಎ) ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ, ಸ್ಥಳ ಮಹಜರನ್ನು ಸ್ಥಳದಲ್ಲಿಯೇ ಬರೆದು, ಬಜಾಜ್ ಬಾಕ್ಸರ್ ಹಾಗೂ ಮದ್ಯ ಮತ್ತು ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ,ಆರೋಪಿಯ ವಿರುದ್ದ ತಕ್ಷೀರು ಸಂ:1/2004-05 ದಿ:10-08-2004 ರಂತೆ ಪ್ರಕರಣವನ್ನು ನೋಂದಾಯಿಸಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಾಹನದ ನೋಂದಣಿ ಮಾಲೀಕ ಹಾಗೂ ಮೊಕದ್ದಮೆಯಲ್ಲಿ ಆರೋಪಿಯಾಗಿರುವ ಡಿ.ಜಯರಾಮ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:19-8-2004 ರಂದು ಅರ್ಜಿ ಸಲ್ಲಿಸಿ ತಾನು ನಿರಪರಾಧಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಹಾಗೂ ಅರ್ಜಿದಾರರು ಮೋಟಾರು ಬೈಕಿಗೆ ಸಮಾನವಾದ ರೂ.24,000/– ಇಂಡೆಮ್ನಿಟಿ ಬಾಂಡ್ ಹಾಗೂ ಅಷ್ಟೇ ಮೊತ್ತಕ್ಕೆ ಸಮಾನವಾದ ಜಾಮೀನುದಾರರಾದ ಶ್ರೀ.ದಿನೇಶ್ ಶೆಟ್ಟಿ, ಬಿನ್: ದಿ.ಪೂವಪ್ಪ, ದೇವಿಕೃಪಾ ಹೌಸ್, ಬುಡೋಳಿ ವಿಲೇಜ್, ದಂಡೆಗೋಳಿ ಪೋಸ್ಟ್, ಬಂಟ್ವಾಳರವರ ಜಮೀನಿನ ಆರ್.ಟಿ.ಸಿ.ಯನ್ನು ಈ ಪ್ರಾಧಿಕಾರಕ್ಕೆ ನೀಡಿದ್ದು ಹಾಗೂ ಪ್ರಾಧಿಕಾರವು ವಿಧಿಸಿದ ಷರತ್ತುಗಳಿಗೆ ಬದ್ಧನಾಗಿರುವುದಾಗಿ ತನ್ನ ಅರ್ಜಿಯಲ್ಲಿ ತಿಳಿಸಿರುತ್ತಾನೆ.

ಸದರಿ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರುರವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ/30 /ಡಿಟಿಸಿಆರ್/2004-05 ದಿ:15-10-2004 ರ ಆದೇಶದಲ್ಲಿ ಪ್ರಕರಣವನ್ನು ತ್ವರಿತಗತಿಯಲ್ಲಿ ಕೈಗೆತ್ತಿಕೊಂಡು ಹಾಗೂ ಶೀಘ್ರಗತಿಯಲ್ಲಿ ಇತ್ಯರ್ಥಪಡಿಸುವ ಉದ್ದೇಶದಿಂದ ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ, ಅರ್ಜಿದಾರರು ಸಲ್ಲಿಸಿದ ರೂ.24,000/– ಮೌಲ್ಯದ ಇಂಡೆಮ್ನಿಟಿ ಬಾಂಡ್ ಹಾಗೂ ಅಷ್ಟೇ ಮೊತ್ತಕ್ಕೆ ಸಮನಾಗಿ ಒಬ್ಬ ಜಾಮೀನುದಾರರನ್ನು ಸಲ್ಲಿಸಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕನ್ನು ಅರ್ಜಿದಾರರ ಸುಪರ್ಧಿಗೆ ಕೆಲವು ಷರತ್ತುಗಳನ್ವಯ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಫಿರ್ಯಾದುದಾರರು ಮುಂದುವರಿಸುತ್ತ, ಇವರ ತನಿಖಾ ವರದಿ ಸಂ: ಸಿಆರ್.ನಂ.1/2004-05 ದಿ:16-2-2005ರ ತನಿಖಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಸದರಿ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಮಾದರಿ ಬಾಟಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸಹಾಯಕ ರಾಸಾಯನಿಕ ವಿಶ್ಲೇಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ವರದಿ ಸಂ: ಇ–739-2 ದಿ: 31-1-2005 ರಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.43% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಬಾಟಲ್‌ಗಳಿಗೆ ಹಚ್ಚಿದ ಲೇಬಲ್ ಗೋವಾ ರಾಜ್ಯದಲ್ಲಿ ಮಾರಾಟಕ್ಕೆ ಎಂದು ನಮೂದಿಸಿರುವ ಕಾರಣ, ಕರ್ನಾಟಕ ರಾಜ್ಯದಲ್ಲಿ ಮಾರಾಟ ಮಾಡಲು ಅಸಾಧ್ಯವಾಗಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರುರವರ ಮುಟ್ಟುಗೋಲು ಆದೇಶ ಸಂಖ್ಯೆ: ಎಸ್‌ಡಿಕೆ/30/ಡಿಟಿಸಿಆರ್/ 2004-05 ದಿ:26-2-2005 ರ ಆದೇಶದಲ್ಲಿ, ಮದ್ಯದ ಸೀಸೆಗಳ ಮೇಲೆ ಗೋವಾ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ನಮೂದಿಸಿರುವ ಲೇಬಲ್‌ಗಳನ್ನು ಅಂಟಿಸಿರುವುದರಿಂದ, ಇದನ್ನು ಕರ್ನಾಟಕ ರಾಜ್ಯದಲ್ಲಿ ಮಾರಾಟ ಮಾಡಲು ನಿಷೇಧವಿರುವ ಕಾರಣ ಹಾಗೂ ಸದರಿ ಮದ್ಯವು ಅಧಿಕೃತ ಸನ್ನದು ಸಂಸ್ಥೆಯಿಂದ ತಯಾರಿಸಲಾಗಿರುವ ಬಗ್ಗೆ ಯಾವುದೇ ಆಧಾರಗಳು ಲಭ್ಯವಿಲ್ಲದಿರುವ ಕಾರಣ, ಇಂತಹ ಮದ್ಯವನ್ನು ಸಾರ್ವಜನಿಕರಿಗೆ

ಸೇವನೆಗೆ ನೀಡುವುದು ಪ್ರಾಣಕ್ಕೆ ಹಾನಿಯಾಗುವ ಸಾಧ್ಯತೆ ಸಂಭವವಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ವಾಹನದ ನೋಂದಣಿ ಮಾಲೀಕರಾದ ಶ್ರೀ.ಡಿ.ಜಯರಾಮ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ಇವರಿಗೆ ಈ ಪ್ರಾಧಿಕಾರದಿಂದ ದಿ:27-6-2009 ರಂದು ಕರ್ನಾಟಕ ಅಬಕಾರಿ ಕಾಯಿದೆ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ಹಾಗೂ ಫಿರ್ಯಾದುದಾರರ ಮೂಲಕ ನೀಡಲಾಗಿದ್ದು, ಆರ್.ಸಿ. ಮಾಲೀಕರು ನೋಂದಣಿ ಅಂಚೆ ಮೂಲಕ ನೀಡಿದ ನೋಟೀಸು ಜಾರಿಯಾಗಿ, ಅಂಚೆ ಸ್ವೀಕೃತಿ ರಶೀದಿ ಈ ಕಚೇರಿಗೆ ಬಂದಿರುತ್ತದೆ ಹಾಗೂ ಅಬಕಾರಿ ನಿರೀಕ್ಷಕರು ಖುದ್ದಾಗಿ ದಿ:11-7-2009 ರಂದು ಜಾರಿಗೊಳಿಸಿ ವರದಿಯನ್ನು ದಿ:13-7-2009 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ಈ ಪ್ರಾಧಿಕಾರವು ನೀಡಿರುವ ದಿ:27-6-2009 ರಂದು ನೀಡಿದ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ಇದುವರೆಗೂ ಸಲ್ಲಿಸಿರುವುದಿಲ್ಲ. ಇದಲ್ಲದೆ ಮಧ್ಯಂತರ ಸುಪರ್ಧಿಗೆ ಪಡೆದುಕೊಂಡ ವಾಹನವನ್ನು ನ್ಯಾಯಾಲಯದ ಕಲಾಪದ ವೇಳೆಯಲ್ಲಿ ಹಾಜರುಪಡಿಸಲು ಹಲವಾರು ಬಾರಿ ನೋಟೀಸು ನೀಡಿದರೂ, ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ.

ಈ ಪ್ರಕರಣದಲ್ಲಿ ಸರಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ, ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿ: 10-8-2004 ರಂದು ಬಜಾಜ್ ಬಾಕ್ಸರ್ ಮೋಟರು ಬೈಕ್ ಸಂಖ್ಯೆ: ಕೆಎ–19–ಎಸ್–878 ರಲ್ಲಿ ಅಕ್ರಮವಾಗಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಾ.ಸಾ: 1

ಶ್ರೀ.ಕಮಲಾಕ್ಷ ಬಲ್ಯಾಯ, ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಲಯ, ಬಂಟ್ವಾಳ ಇವರು ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿದ್ದು, ಇವರು ದಿ:27-4-2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ದಿ: 10-8-2004 ರಂದು ರಾತ್ರಿ 10-00 ಗಂಟೆ ಸಮಯದಲ್ಲಿ ಬಂಟ್ವಾಳ ತಾಲೂಕು ವಾಮದಪದವು ಪೇಟೆಯ ರಸ್ತೆಯ ಬದಿಯಲ್ಲಿ ಒಂದು ಮೋಟಾರು ಬೈಕನ್ನು ನಿಲ್ಲಿಸಿದ್ದು, ಅದರ ನೋಂದಣಿ ಸಂಖ್ಯೆ: ಕೆಎ–19–ಎಸ್–878 ಆಗಿದ್ದು, ಸದರಿ ವಾಹನವನ್ನು ಪರಿಶೀಲಿಸಲಾಗಿ, ಸದರಿ ವಾಹನದ ಪೆಟ್ರೋಲ್ ಟ್ಯಾಂಕ್‌ನ ಮೇಲೆ ಎರಡು ಗೋಣಿ ಚೀಲಗಳಿದ್ದು, ಅವುಗಳಲ್ಲಿ 750 ಎಂ.ಎಲ್.ನ 12 ಸೀಸೆಗಳಂತೆ ಒಟ್ಟು 24 ಬಾಟಲ್‌ಗಳಲ್ಲಿ ಕೊಲಂಬಿಯ ವಿಸ್ಕಿ ಎಂದು ಬರೆದಿರುವ ಲೇಬಲ್ ಇದ್ದು, ಸದರಿ ಮದ್ಯವನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಲಾಗಿ, ತನ್ನಲ್ಲಿ ಯಾವುದೂ ಇಲ್ಲವೆಂದು ಹಾಗೂ ಸದರಿ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತಾನು ಡಿ.ಜಯರಾಮ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ಎಂದು ತಿಳಿಸಿದನು. ಸ್ಥಳದಲ್ಲಿ ತನ್ನ ಸಿಬ್ಬಂದಿಯಲ್ಲದೆ ಬೇರೆ ಸಾಕ್ಷಿದಾರರು ದೊರಕಿಲ್ಲದ ಕಾರಣ ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿರಿಸಿ ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿದೆವು. ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗೆ ಎರಡು ಮಾದರಿ ಸೀಸೆಗಳನ್ನು ಪ್ರತ್ಯೇಕ ಮಾಡಿ, ಅದರ ಬಾಯಿಗೆ ಬಟ್ಟೆ ದಾರ ಸುತ್ತಿ, ಸ್ಥಳದಲ್ಲಿಯೇ ಮಾದರಿ ಸೀಲ್ ಹಾಗೂ ಮಾದರಿ ಮೊಹರನ್ನು ತಯಾರಿಸಲಾಯಿತು. ವಾಹನ, ಸೊತ್ತು ಹಾಗೂ ಆರೋಪಿಯನ್ನು ವಶಕ್ಕೆ ತೆಗೆದುಕೊಂಡು, ನಂತರ ಕಚೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ಸಲ್ಲಿಸಿರುತ್ತೇನೆ. ಆರೋಪಿಯು ಸೂಕ್ತ ಜಾಮೀನು ಕೊಟ್ಟಿರುವುದರಿಂದ, ಆತನನ್ನು ಕಾನೂನಿನಂತೆ ಬಿಡುಗಡೆಗೊಳಿಸಿರುತ್ತೇನೆ. ಸದರಿ ಸೊತ್ತುಗಳನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ಅನುಮತಿ ಪಡೆದಿರುತ್ತೇನೆ. ತಕ್ಷೀರಿಗೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ತನ್ನ ಅಬಕಾರಿ ರಕ್ಷಕರ ಮುಖಾಂತರ ರಾಸಾಯನಿಕ

ವಿಶ್ಲೇಷಕರಿಗೆ ಕಳುಹಿಸಿಕೊಟ್ಟಿರುತ್ತೇನೆ. ಮಹಜರನ್ನು ನಿಶಾನೆ ಪಿ–1 ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು, ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಡಿಯಲ್ಲಿ ತಯಾರಿಸಿದ ವರದಿಯನ್ನು ನಿಶಾನೆ ಪಿ–3 ಎಂದು ಹಾಗೂ ರಾಸಾಯನಿಕ ವಿಶ್ಲೇಷಕರ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಕ್ಷೀರು ನಡೆದ ಸ್ಥಳದಲ್ಲಿ ಸಾಕ್ಷಿದಾರರಾಗಿ ಬೇರೆ ಯಾರೂ ಸಿಗದ ಕಾರಣ, ಸಿಬ್ಬಂದಿಯವರನ್ನೇ ಸಾಕ್ಷಿಯಾಗಿ ಇರಿಸಿಕೊಂಡಿರುತ್ತೇನೆ. ಸದರಿ ಮದ್ಯವನ್ನು ಮಾರಾಟ ಮಾಡುವ ಉದ್ದೇಶದಿಂದ ಸಾಗಾಟ ಮಾಡಿರುವುದು, ಸದರಿ ಮದ್ಯದಲ್ಲಿ ಸುಮಾರು 24 ಬಾಟಲ್‌ಗಳಿದ್ದು, ಅದು ಪ್ಲಾಸ್ಟಿಕ್ ಬಾಟಲ್ ಆಗಿದ್ದುದರಿಂದ ಸಾಗಿಸಲು ಸಾಧ್ಯವಾಗಿರುತ್ತದೆ. ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಸಲ್ಲಿಸಿದ ಹೇಳಿಕೆಗಳು ತಾವು ದಾಖಲಿಸಿದ ತಕ್ಷೀರಿಗೆ ಒಂದಕ್ಕೊಂದು ತಾಳೆಯಾಗಿದ್ದು, ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

ಪ್ರಾ.ಸಾ: 2

ಶ್ರೀ.ವಾಮನ, ಅಬಕಾರಿ ರಕ್ಷಕ, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ಇವರು ದಿ:29-03-2007 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ತಕ್ಷೀರಿಗೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ದಿ: 23-4-2004 ರಂದು ಅಬಕಾರಿ ಉಪ ನಿರೀಕ್ಷಕರಿಂದ ಪಡೆದುಕೊಂಡು ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿ: 5-2-2005 ರಂದು ರಾಸಾಯನಿಕ ತಜ್ಞರಿಂದ ಮಾದರಿ ಸೀಸೆಗಳ ವರದಿಯನ್ನು ಅಬಕಾರಿ ಉಪ ನಿರೀಕ್ಷಕರಿಗೆ ತಲುಪಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಾನು ಮದ್ಯದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗೆ ತೆಗೆದುಕೊಂಡು ಹೋಗಿಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಸಾಕ್ಷಿದಾರರು ನೀಡಿರುವ ಹೇಳಿಕೆಗಳು ದಾಖಲಿಸಿದ ತಕ್ಷೀರಿಗೆ ಸಂಬಂಧಿಸಿ ಮಹಜರಿಗೆ ಒಂದಕ್ಕೊಂದು ಪೂರಕವಾಗಿದ್ದು, ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯ ದಾಸ್ತಾನು ಹೊಂದಿ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಅರ್ಜಿದಾರರಿಗೂ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ಮತ್ತು ಪ್ರತಿರಕ್ಷೆ ಸಾಕ್ಷಿಗಳನ್ನು ಹಾಜರುಪಡಿಸಲು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸುಗಳನ್ನು ಅರ್ಜಿದಾರರು ಹಾಗೂ ಅವರ ಪರ ವಕೀಲರು ಸ್ವೀಕರಿಸಿದರೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ವಿಚಾರಣೆಗಾಗಿ ಹಾಜರಾಗಿರುವುದಿಲ್ಲ. ವಾಹನದ ಮಾಲೀಕರಿಗೆ ಹಲವಾರು ಬಾರಿ ಕಾಲಾವಕಾಶ ನೀಡಲಾಗಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿರಪರಾಧವನ್ನು ಸಾಬೀತುಪಡಿಸಲು ಯಾವುದೇ ಆಸಕ್ತಿ ತೋರಿರುವುದಿಲ್ಲ. ಆದುದರಿಂದ ಅರ್ಜಿದಾರರು ಸಾಕ್ಷ್ಯಾಧಾರಗಳನ್ನು ನೀಡಲು ಹಾಜರಾಗದಿರುವುದನ್ನು ಗಮನಿಸಿದಾಗ ಮತ್ತು ವಾಹನದ ಮಾಲೀಕರೇ ಅಪರಾಧ ಸ್ಥಳದಲ್ಲಿ ವಾಹನದೊಂದಿಗೆ ಸಿಕ್ಕಿಬಿದ್ದು, ವಾಹನದೊಂದಿಗೆ ದಸ್ತಗಿರಿಗೆ ಒಳಪಟ್ಟಿರುತ್ತಾರೆ. ಆದುದರಿಂದ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯ ಸಾಗಾಣಿಕೆಗೆ ತೊಡಗಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ ಹಾಗೂ ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿ: 27-6-2009 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿ ಹಾಗೂ ತನಿಖಾಧಿಕಾರಿಗಳ ಮೂಲಕ ಜಾರಿಗೊಳಿಸಲಾಗಿದ್ದು, ಅದಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಪ್ರಕರಣದಲ್ಲಿ ದಸ್ತಗಿರಿಯಾದ ಆರೋಪಿಯು ವಾಹನದ ಮೂಲ ನೋಂದಣಿ ಮಾಲೀಕರಾಗಿದ್ದು, ಅಪರಾಧ ಸ್ಥಳದಲ್ಲಿ ದಸ್ತಗಿರಿಯಾಗಿರುವ ಕಾರಣ, ಅವರ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಹಾಗೂ ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಬಾಕ್ಸರ್ ಮೋಟಾರು ಬೈಕ್ ಸಂಖ್ಯೆ: ಕೆಎ–19–ಎಸ್–878 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/30/ಡಿಟಿಸಿಆರ್/2004–05 ದಿನಾಂಕ:29ನೇ ಸೆಪ್ಟೆಂಬರ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಲಯ, ಬಂಟ್ವಾಳ ಇವರ ತಕ್ಷೀರು ಸಂ: 1/2004-05 ದಿ:10-8-2004 ರಲ್ಲಿ ಜಪ್ತುಪಡಿಸಿರುವ ವಾಹನ ಬಜಾಜ್ ಬಾಕ್ಸರ್ ಮೋಟಾರು ಬೈಕ್ ಸಂಖ್ಯೆ: ಕೆಎ–19–ಎಸ್–878 ನ್ನು ಈ ಪ್ರಾಧಿಕಾರದ ಆದೇಶದ ಸಂಖ್ಯೆ: ಎಸ್‌ಡಿಕೆ/30/ಡಿಟಿಸಿಆರ್/2004-05 ದಿ: 15-10-2004 ರಲ್ಲಿ ವಾಹನದ ಆರ್.ಸಿ. ಮಾಲೀಕರಾದ ಡಿ.ಜಯರಾಮ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀ ದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ಇವರ ಪರ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ರದ್ದುಗೊಳಿಸಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಈ ಆದೇಶದ 30 ದಿವಸದೊಳಗೆ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ಕಚೇರಿಯಲ್ಲಿ ಹಾಜರುಪಡಿಸಲು ಆದೇಶಿಸಿದೆ. ವಾಹನದ ಮಾಲೀಕರು ಸದ್ರಿ ವಾಹನವನ್ನು ಸಕಾಲದಲ್ಲಿ ಇಲಾಖೆಯ ಸುಪರ್ಧಿಗೆ ಒಪ್ಪಿಸದೆ ಇದ್ದಲ್ಲಿ, ಇದರ ಮೌಲ್ಯಕ್ಕೆ ಅನುಗುಣವಾಗಿ ವಾಹನ ಮಾಲೀಕರು ನೀಡಿರುವ ಇಂಡೆಮ್ನಿಟಿ ಬಾಂಡ್‌ನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದೆ ಹಾಗೂ ಜಾಮೀನುದಾರರಾದ ಶ್ರೀ.ದಿನೇಶ್ ಶೆಟ್ಟಿ, ಬಿನ್: ಡಿ.ಪೂವಪ್ಪ ಶೆಟ್ಟಿ, ಶ್ರೀದೇವಿಕೃಪಾ ಮನೆ, ಬುಡೋಳಿ ಗ್ರಾಮ, ದಂಡೆಗೋಳಿ ಅಂಚೆ, ಬಂಟ್ವಾಳ ತಾಲೂಕುರವರ ಜಮೀನನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನದ ಮೌಲ್ಯವನ್ನು ಪಡೆಯಲಾಗುವುದು.

ಈ ಆದೇಶವನ್ನು ದಿನಾಂಕ:29-09-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀ.ಕಮಲಾಕ್ಷ ಬಲ್ಯಾಯ, ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಲಯ, ಬಂಟ್ವಾಳ.
ಪ್ರಾ.ಸಾ.–2: ಶ್ರೀ.ವಾಮನ, ಅಬಕಾರಿ ರಕ್ಷಕ, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

| | | |
|---|---|---|
| ನಿಶಾನೆ ಪಿ–1 | : | ಮಹಜರಿನ ಪ್ರತಿ. |
| ನಿಶಾನೆ ಪಿ–2 | : | ಪ್ರಥಮ ಮಾಹಿತಿ ವರದಿ ಪ್ರತಿ |
| ನಿಶಾನೆ ಪಿ–3 | : | ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಡಿಯ ವರದಿ |
| ನಿಶಾನೆ ಪಿ–4 | : | ರಾಸಾಯನಿಕ ವಿಶ್ಲೇಷಣಾ ವರದಿ |

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:–

–ಇಲ್ಲ–

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1028

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/293/ಡಿಟಿಸಿಆರ್/2005–06 ದಿನಾಂಕ:29ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ನಿರೀಕ್ಷಕರು,
ಬಂಟ್ವಾಳ ಉಪ ವಿಭಾಗ,
ಬಂಟ್ವಾಳ.

**ಆರೋಪಿ:**

1) ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು.
2) ಹರೀಶ್ ಪೂಜಾರಿ, ಬಿನ್: ನೋಣಯ್ಯ ಪೂಜಾರಿ, ಕೊಯಿಲ ಅಂಚೆ, ಬಂಟ್ವಾಳ.

(ಪರಾರಿಯಾಗಿರುತ್ತಾರೆ)

**ವಾಹನ ಮಾಲೀಕರು:**

ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03-12-2005 ರಂದು ಬೆಳಿಗ್ಗೆ ಸುಮಾರು 9-45 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬಂಟ್ವಾಳ ತಾಲೂಕು ಬಂಟ್ವಾಳ ಮೂಡಬಿದ್ರೆ ರಸ್ತೆಯ ಕೊಯಿಲ ಎಂಬಲ್ಲಿ ರಸ್ತೆ ಕಾವಲು ನಡೆಸುತ್ತಿದ್ದ ಸಮಯದಲ್ಲಿ ಅತೀ ವೇಗವಾಗಿ ಬರುತ್ತಿದ್ದ ಬಜಾಜ್ ಆಟೋರಿಕ್ಷಾ ಸಂಖ್ಯೆ:ಕೆಎ–19–ಎ–2693 ನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಸದರಿ ಆಟೋರಿಕ್ಷಾವನ್ನು ಚಾಲಕನು ನಿಲ್ಲಿಸಿ, ತದನಂತರ ಆಟೋರಿಕ್ಷಾವನ್ನು ತಪಾಸಣೆ ನಡೆಸಿದಾಗ, ಅದರೊಳಗೆ 3 ಪ್ಲಾಸ್ಟಿಕ್ ಕ್ಯಾನುಗಳಿದ್ದು, ಶೇಂದಿ ವಾಸನೆ ಬರುತ್ತಿತ್ತು. ಸದರಿ ಸಿಬ್ಬಂದಿಯವರು ಪರಿಶೀಲಿಸುತ್ತಿರುವಾಗ, ಅದರೊಳಗಿದ್ದ ಒಬ್ಬ ವ್ಯಕ್ತಿಯು ರಿಕ್ಷಾದ ಬಲಭಾಗದಿಂದ ಕೆಳಗೆ ಜಿಗಿದು ರಸ್ತೆಯ ಕೆಳಗಿರುವ ತಗ್ಗು ಪ್ರದೇಶಕ್ಕೆ ಓಡಿ ಪರಾರಿಯಾದನು. ಚಾಲಕನಲ್ಲಿ ಆತನ ಹೆಸರು, ವಿಳಾಸ ಕೇಳಿದಾಗ ಶೇಂದಿಯನ್ನು ಆತನೇ ಸಾಗಾಟ ಮಾಡುತ್ತಿರುವುದು. ಆತನ ಹೆಸರು ಹರೀಶ್ ಪೂಜಾರಿ,ಬಿನ್: ನೋಣಯ್ಯ ಪೂಜಾರಿ, ಕೊಯಿಲ ಅಂಚೆ, ಬಂಟ್ವಾಳ ತಾಲೂಕು ಎಂದು ತಿಳಿಸಿದನು. ರಿಕ್ಷಾದಲ್ಲಿದ್ದ ಕ್ಯಾನುಗಳನ್ನು ಪರಿಶೀಲಿಸಿದಾಗ, 35 ಲೀಟರ್ ಗಾತ್ರದ ಒಂದು ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ 30 ಲೀಟರ್ ಶೇಂದಿ, 20 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನಿನಲ್ಲಿ 20 ಲೀಟರ್ ಶೇಂದಿ ಮತ್ತು 10 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಸುಮಾರು 10 ಲೀಟರ್ ಶೇಂದಿ ತುಂಬಿದ್ದು, ಒಟ್ಟು 60 ಲೀಟರ್ ಶೇಂದಿಯನ್ನು ಸಾಗಾಟ ಮಾಡಲು ರಹದಾರಿ ಪತ್ರಗಳಿವೆಯೇ ಎಂದು ವಿಚಾರಿಸಿದಾಗ, ತನ್ನಲ್ಲಿ ಅದು ಯಾವುದೂ ಇಲ್ಲವೆಂದು ತಿಳಿಸಿದನು. ಇದು ಕರ್ನಾಟಕ ಅಬಕಾರಿ ಕಾಯಿದೆ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವ ಬಗ್ಗೆ ಎಂದು ತಿಳಿಸಿ, ಆತನ ಹೆಸರು ವಿಚಾರಿಸಿದಾಗ ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು ಎಂದು ತಿಳಿಸಿರುತ್ತಾನೆ. ಸದರಿ ದೊರೆತ ಪ್ಲಾಸ್ಟಿಕ್ ಕ್ಯಾನುಗಳಿಂದ 750 ಎಂ.ಎಲ್.ನ 3 ಬಾಟಲ್‌ಗಳಲ್ಲಿ ಶೇಂದಿಯನ್ನು ತೆಗೆದು, ಅದಕ್ಕೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಲಾಯಿತು ಹಾಗೂ ಉಳಿದ ಕ್ಯಾನುಗಳಿಗೂ ಸೀಲ್ ಮಾಡಿ, ಸದರಿ ಆರೋಪಿಗಳ ಗುರುತಿನ ಚೀಟಿಯನ್ನು ಅಂಟಿಸಿ ಪಂಚರು ಯಾರೂ ಸಿಗದ ಕಾರಣ ಸಿಬ್ಬಂದಿಯವರನ್ನೇ ಪಂಚರನ್ನಾಗಿರಿಸಿಕೊಂಡು, ಶೇಂದಿ ಹಾಗೂ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮಹಜರನ್ನು ಸ್ಥಳದಲ್ಲಿಯೇ ಬರೆದು ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳ ವಿರುದ್ಧ ತಕ್ಷೀರು ಸಂ:4/2005-06 ದಿ:03-12-2005 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ತನಿಖೆಯನ್ನು ಮುಂದುವರಿಸಿದ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/4/2005-06 ದಿ:28-12-2005 ರ ತನಿಖಾ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾ ಕೆಎ–19–ಎ–2693 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ, ಮಂಗಳೂರು ಇವರಿಂದ ಪಡೆದು, ಸದರಿ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿ ಪ್ರಶಾಂತ್.ಕೆ ಇವರ ಹೆಸರನ್ನೇ ನೋಂದಾಯಿಸಿರುವುದು ಕಂಡು ಬಂದಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ಕಾಲಂ 43ಎ ರೀತ್ಯಾ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ.ಜಿಲ್ಲೆ, ಮಂಗಳೂರುರವರು ನೀಡಿರುವ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು ಮತ್ತು ಹೆಚ್.ಪಿ.ಎ.ದಾರರಾದ ಶುಗುಣಾಲು ಫೈನಾನ್ಸಿಯರ್, ಸಹುಕಾರ್ಪೆಟ್, ಚೆನ್ನೈ ಇವರುಗಳಿಗೆ ಈ ಪ್ರಾಧಿಕಾರದಿಂದ ದಿ:10-1-2006 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ಸ್ವೀಕೃತಿಯಾಗದೆ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ನಂತರ ಪ್ರಕರಣದ ಆರೋಪಿಗಳಲ್ಲಿ ಪರಾರಿಯಾದ ಹರೀಶ್ ಪೂಜಾರಿ ಇವರಿಗೆ ಈ ಪ್ರಾಧಿಕಾರದಿಂದ ದಿ:10-1-2006 ರಂದು ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ಸ್ವೀಕೃತಿಯಾಗಿ ಈ ಪ್ರಾಧಿಕಾರಕ್ಕೆ ಅದರ ಸ್ವೀಕೃತಿ ರಶೀದಿಯು ಬಂದಿರುತ್ತದೆ.

ವಾಹನದ ನೋಂದಣಿ ಮಾಲೀಕರಾದ ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:6-2-2006 ರಂದು ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತನ್ನ ಅರ್ಜಿಯಲ್ಲಿ ಕೋರಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾದ ಮಧ್ಯಂತರ ಬಿಡುಗಡೆಗಾಗಿ ಸಲ್ಲಿಸಿದ ಅರ್ಜಿಯ ಬಗ್ಗೆ ವಿಚಾರಣೆಯನ್ನು ಕೈಗೊಳ್ಳಲಾಗಿದ್ದು, ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ:ಇ.ಐ.ಬಿ./ಡಿಇಟಿಸಿಆರ್/293/2005-06 ದಿ:25-7-06 ರ ಆದೇಶದಲ್ಲಿ ವಾಹನದ ಮೌಲ್ಯಕ್ಕೆ ಸಮಾನವಾದ ಮೊತ್ತಕ್ಕೆ ರೂ.17,000/– ಬ್ಯಾಂಕ್ ಗ್ಯಾರಂಟಿಯನ್ನು ನೀಡಿದಲ್ಲಿ, ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಸದರಿ ಆದೇಶದಂತೆ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.17,000/– ಕ್ಕೆ ಡಿ.ಡಿ.ಯನ್ನು ಸಿಂಡಿಕೇಟ್ ಬ್ಯಾಂಕ್, ಕುಲಶೇಖರ ಶಾಖೆ, ಮಂಗಳೂರು ಇವರಿಂದ ಪಡೆದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ತನ್ನ ಸುಪರ್ಧಿಗೆ ದಿ:3-8-2006 ರಂದು ತಾತ್ಕಾಲಿಕ ನೆಲೆಯಲ್ಲಿ ಪಡೆದುಕೊಂಡಿರುತ್ತಾರೆ. ಅರ್ಜಿದಾರರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ರೂ.17,000/–ಮೌಲ್ಯದ ಡಿ.ಡಿ.ಯನ್ನು ರೆವೆನ್ಯೂ ಡಿಪೋಸಿಟ್‌ನಲ್ಲಿ ಭದ್ರತೆಯಾಗಿ ಚಲನ್ ಸಂಖ್ಯೆ: 129 ದಿ: 8-8-2006 ರಂತೆ ಎಸ್.ಬಿ.ಐ., ಮಂಗಳೂರು ಶಾಖೆಯಲ್ಲಿ ಇಡಲಾಗಿದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತನಿಖಾ ವರದಿ ಸಂ:ಸಿಆರ್‌ಎಂ/4/2005-06 ದಿ:28-4-2006 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಶೇಂದಿಯಲ್ಲಿ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಕಳುಹಿಸಲಾಗಿದ್ದು, ಇವರ ಪತ್ರ ಸಂಖ್ಯೆ: ಇ–653-3 ದಿ:3-1-2005 ರ ವರದಿಯಲ್ಲಿ ಶೇಂದಿಯ ಮದ್ಯಸಾರದ ಪ್ರಮಾಣ ಶೇಕಡಾ 03.0 ಇರುವುದಾಗಿ ದೃಢೀಕರಣ ಪತ್ರ ನೀಡಿದ್ದು, ಸದರಿ ಶೇಂದಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಶಿಫಾರಸ್ಸಿನ ಮೇರೆಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ., ದ.ಕ.ಜಿಲ್ಲೆ, ಮಂಗಳೂರು ಇವರ ಕಚೇರಿ ನಡವಳಿ ಆದೇಶ ಸಂಖ್ಯೆ: ಇ.ಐ.ಬಿ/ ಡಿಟಿಸಿಆರ್/293/2005-06 ದಿ:27-7-2006 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಶೇಂದಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು, ಉಳಿದ ಪ್ಲಾಸ್ಟಿಕ್ ಕ್ಯಾನುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಆದೇಶಿಸಲಾಗಿರುತ್ತದೆ.ಸದರಿ ಆದೇಶದಂತೆ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ಮಹಜರು ಜರುಗಿಸಿ, ದಿ:7-9-2006 ರಂದು ಅವರ ಕಚೇರಿಯ ವಠಾರದಲ್ಲಿ ನಾಶಪಡಿಸಿ, ಮಹಜರು ಪ್ರತಿಯನ್ನು ಹಾಗೂ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) **ಮೊದಲನೇ ವಿವಾದಾಂಶ:** ದಿ: 03-12-2005 ರಂದು ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2693 ರಲ್ಲಿ ಅಕ್ರಮವಾಗಿ ಶೇಂದಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) **ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಶೇಂದಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ ಅಮರನಾಥ ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ದಿ:21-6-2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:3-12-2005 ರಂದು ಬಂಟ್ವಾಳ ಮೂಡಬಿದ್ರೆ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿದ್ದು, ಕೊಯಿಲ ಎಂಬ ಸ್ಥಳದಲ್ಲಿ ಅತೀ ವೇಗವಾಗಿ ಬರುತ್ತಿದ್ದ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2693 ನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಸದರಿ ಆಟೋರಿಕ್ಷಾವನ್ನು ಚಾಲಕನು ನಿಲ್ಲಿಸಿ, ತದನಂತರ ಆಟೋರಿಕ್ಷಾವನ್ನು ತಪಾಸಣೆ ನಡೆಸಿದಾಗ, ಅದರೊಳಗೆ 3 ಪ್ಲಾಸ್ಟಿಕ್ ಕ್ಯಾನುಗಳಿದ್ದು, ಶೇಂದಿ ವಾಸನೆ ಬರುತ್ತಿತ್ತು. ಸದರಿ ಸಿಬ್ಬಂದಿಯವರು ಪರಿಶೀಲಿಸುತ್ತಿರುವಾಗ, ಅದರೊಳಗಿದ್ದ ಒಬ್ಬ ವ್ಯಕ್ತಿಯು ರಿಕ್ಷಾದ ಬಲಭಾಗದಿಂದ ಕೆಳಗೆ ಜಿಗಿದು ರಸ್ತೆಯ ಕೆಳಗಿರುವ ತಗ್ಗು ಪ್ರದೇಶಕ್ಕೆ ಓಡಿ ಪರಾರಿಯಾದನು. ಚಾಲಕನಲ್ಲಿ ಆತನ ಹೆಸರು, ವಿಳಾಸ ಕೇಳಿದಾಗ ಶೇಂದಿಯನ್ನು ಆತನೇ ಸಾಗಾಟ ಮಾಡುತ್ತಿರುವುದು. ಆತನ ಹೆಸರು ಹರೀಶ್ ಪೂಜಾರಿ, ಬಿನ್: ನೋಣಯ್ಯ ಪೂಜಾರಿ, ಕೊಯಿಲ ಅಂಚೆ, ಬಂಟ್ವಾಳ ತಾಲೂಕು ಎಂದು ತಿಳಿಸಿದನು. ರಿಕ್ಷಾದಲ್ಲಿದ್ದ ಕ್ಯಾನುಗಳನ್ನು ಪರಿಶೀಲಿಸಿದಾಗ, 35 ಲೀಟರ್ ಗಾತ್ರದ ಒಂದು ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ 30 ಲೀಟರ್ ಶೇಂದಿ, 20 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನಿನಲ್ಲಿ 20 ಲೀಟರ್ ಶೇಂದಿ ಮತ್ತು 10 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಸುಮಾರು 10 ಲೀಟರ್ ಶೇಂದಿ ತುಂಬಿದ್ದು, ಒಟ್ಟು 60 ಲೀಟರ್ ಶೇಂದಿಯನ್ನು ಸಾಗಾಟ ಮಾಡಲು ರಹದಾರಿ ಪತ್ರಗಳಿವೆಯೇ ಎಂದು ವಿಚಾರಿಸಿದಾಗ, ತನ್ನಲ್ಲಿ ಅದು ಯಾವುದೂ ಇಲ್ಲವೆಂದು ತಿಳಿಸಿದನು. ಇದು ಕರ್ನಾಟಕ ಅಬಕಾರಿ ಕಾಯಿದೆ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವ ಬಗ್ಗೆ ಎಂದು ತಿಳಿಸಿ, ಆತನ ಹೆಸರು ವಿಚಾರಿಸಿದಾಗ ಪ್ರಶಾಂತ್, ಬಿನ್: ರಾಜು ಗೌಡ, ಕೊಯಿಲ ಮನೆ ಮತ್ತು ಅಂಚೆ, ಬಂಟ್ವಾಳ ತಾಲೂಕು ಎಂದು ತಿಳಿಸಿರುತ್ತಾನೆ. ಸದರಿ ದೊರೆತ ಪ್ಲಾಸ್ಟಿಕ್ ಕ್ಯಾನುಗಳಿಂದ 750 ಎಂ.ಎಲ್.ನ 3 ಬಾಟಲ್‌ಗಳಲ್ಲಿ ಶೇಂದಿಯನ್ನು ತೆಗೆದು ಬಟ್ಟೆದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಲಾಯಿತು ಹಾಗೂ ಉಳಿದ ಕ್ಯಾನುಗಳಿಗೂ ಸೀಲ್ ಮಾಡಿ, ಸದರಿ ಆರೋಪಿಗಳ ಗುರುತಿನ ಚೀಟಿಯನ್ನು ಅಂಟಿಸಿ ಪಂಚರು ಯಾರೂ ಸಿಗದ ಕಾರಣ ಸಿಬ್ಬಂದಿಯವರನ್ನೇ ಪಂಚರನ್ನಾಗಿರಿಸಿಕೊಂಡು, ಶೇಂದಿ ಹಾಗೂ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಇಲಾಖಾ ವಶಕ್ಕೆ ತೆಗೆದು ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮಹಜರನ್ನು ಸ್ಥಳದಲ್ಲಿಯೇ ಬರೆದು, ನಂತರ ಕಚೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ, ವರದಿಯನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು ಗುರುತಿಸಲಾಯಿತು. ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಡಿಯಲ್ಲಿ ಒಂದು ವರದಿಯನ್ನು ತಯಾರಿಸಿ ಇದನ್ನು ನಿಶಾನೆ ಪಿ–3 ಎಂದು, ಸ್ಥಳದಲ್ಲಿಯೇ ತಯಾರಿಸಿದ ಮಾದರಿ ಸೀಲ್‌ನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ನಂತರ ವಶಪಡಿಸಿಕೊಂಡ ವಾಹನದ ಮಾಲೀಕತ್ವದ ಬಗ್ಗೆ ಸಂಬಂಧಪಟ್ಟ ಸಾರಿಗೆ ಅಧಿಕಾರಿಯವರಿಂದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆದು, ಸದರಿ ವರದಿಯ ಪ್ರಕಾರ ವಾಹನದ ಮಾಲೀಕ ಪ್ರಶಾಂತ್.ಕೆ ರಾಜು ಗೌಡ ಎಂದು ತಿಳಿದು ಬಂದಿರುತ್ತದೆ. ನಂತರ ದಿ:27-12-2005 ರಂದು ತನ್ನ ರಕ್ಷಕರ ಮೂಲಕ ಪ್ರಕರಣದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ಅವರಿಂದ ವರದಿಯನ್ನು ಪಡೆದುಕೊಂಡಿರುತ್ತೇನೆ. ರಾಸಾಯನಿಕ ತಜ್ಞರು ಸಲ್ಲಿಸಿದ ವರದಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು ಮತ್ತು ದಿ:28-12-2005 ರಂದು ತನಿಖಾ ವರದಿಯನ್ನು ಅಬಕಾರಿ ಅಧೀಕ್ಷಕರು, ಮಂಗಳೂರು ಇವರಿಗೆ ಸಲ್ಲಿಸಲಾಗಿದ್ದು, ಸದರಿ ವರದಿಯನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರು ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದೇ ಇಲ್ಲದಿರುವುದರಿಂದ ಪಾಟೀ ಸವಾಲನ್ನು ಇಲ್ಲವೆಂದು ಹಾಗೂ ವಕೀಲರ ಕೋರಿಕೆ ಮೇರೆಗೆ ದಿ:4-3-2009 ರಂದು ಪಾಟೀ ಸವಾಲು ನಡೆಸುವ ಬಗ್ಗೆ ಅರ್ಜಿಯನ್ನು ಸಲ್ಲಿಸಿದ್ದು, ಆ ದಿವಸ ಕೂಡಾ ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರು ಗೈರು ಹಾಜರು ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಸಾಕ್ಷಿದಾರರು ನೀಡಿರುವ ಸಾಕ್ಷಿಯು ಮಹಜರಿನಲ್ಲಿ ನಮೂದಿಸಿದ ಅಂಶಗಳಿಗೂ ಹಾಗೂ ಅವರು ನೀಡಿರುವ ಸಾಕ್ಷಿಯು ಒಂದಕ್ಕೊಂದು ಪೂರಕವಾಗಿರುತ್ತದೆ. ಈ ಸಾಕ್ಷಿದಾರರಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತ್ತಿರುವುದಿಲ್ಲ.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದ ಶ್ರೀ.ದಿನಕರ, ನಿವೃತ್ತ ಅಬಕಾರಿ ಮುಖ್ಯ ರಕ್ಷಕ, ಕೋಟೆಕಾರ್ ಪೋಸ್ಟ್, ಸೋಮೇಶ್ವರ, ಇವರು ದಿ:31-12-2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:27-12-2005 ರಂದು ತಕ್ಷೀರಿಗೆ ಸಂಬಂಧಪಟ್ಟ 750 ಎಂ.ಎಲ್.ನ 3 ಬಾಟಲ್ ಶೇಂದಿ ಮಾದರಿಗಳನ್ನು ರಾಸಾಯನಿಕ ತಜ್ಞರಲ್ಲಿ ಪರೀಕ್ಷೆಗೆ ತೆಗೆದುಕೊಂಡು ಹೋಗಿರುತ್ತೇನೆ ಹಾಗೂ ದಿ: 3-1-2006 ರಂದು ರಾಸಾಯನಿಕ ತಜ್ಞರು ಪರಿಶೀಲಿಸಿದ ವರದಿ ಹಾಗೂ ಸ್ಯಾಂಪಲ್‌ಗಳನ್ನು ತೆಗೆದುಕೊಂಡು ಕಚೇರಿಗೆ ತಲುಪಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಯಾರೂ ಹಾಜರಾಗದಿರುವುದರಿಂದ, ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ಹಾಜರುಪಡಿಸಲು ಹಲವಾರು ಬಾರಿ ನೋಟೀಸನ್ನು ನೀಡಲಾಗಿದ್ದು, ಸದರಿ ನೋಟೀಸು ಸ್ವೀಕೃತವಾದ ಬಗ್ಗೆ ಸ್ವೀಕೃತಿ ರಶೀದಿ ಈ ಪ್ರಾಧಿಕಾರದಲ್ಲಿ ತಲುಪಿರುತ್ತದೆ. ಈ ಬಗ್ಗೆ ಸಾಕಷ್ಟು ಕಾಲಾವಕಾಶ ನೀಡಿದರೂ ತಮ್ಮ ರಕ್ಷಣಾ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುವುದಿಲ್ಲ ಹಾಗೂ ಈ ಪ್ರಾಧಿಕಾರವು ನೀಡಿದ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ಇದುವರೆಗೂ ಸಲ್ಲಿಸಿರುವುದಿಲ್ಲ.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:3-12-2005 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂ:ಕೆಎ–19–ಎ–2693 ರಲ್ಲಿ ಅಕ್ರಮವಾಗಿ 60 ಲೀಟರ್ ಶೇಂದಿಯನ್ನು ಅಕ್ರಮ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಶೇಂದಿ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಶೇಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಸಾಕ್ಷಿ ನೀಡಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ದಿ:3-12-2005 ರಂದು ರಸ್ತೆ ಕಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಆರ್.ಸಿ. ಮಾಲೀಕರು ಖುದ್ದು ಅಕ್ರಮ ಶೇಂದಿ ಸಾಗಾಟ ಮಾಡುತ್ತಿರುವ ಸಂದರ್ಭದಲ್ಲಿ ದಸ್ತಗಿರಿಯಾದ ಆರೋಪಿ ವಾಹನದ ಚಾಲಕ ಹಾಗೂ ಮಾಲೀಕನಾಗಿದ್ದು, ತಾನೇ ಸ್ವತ: ಶೇಂದಿಯನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ ಆದುದರಿಂದ ವಾಹನ ಮಾಲೀಕನೇ ಸ್ವತ: ತನ್ನ ಆಟೋರಿಕ್ಷಾವನ್ನು ಅಕ್ರಮ ಶೇಂದಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾದಲ್ಲಿ ಅಕ್ರಮವಾಗಿ 60 ಲೀಟರ್ ಶೇಂದಿ ಸಾಗಾಟ ಮಾಡಲು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂ:ಕೆಎ–19–ಎ–2693 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/293/ಡಿಟಿಸಿಆರ್/2005–06 ದಿನಾಂಕ:29ನೇ ಸೆಪ್ಟೆಂಬರ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತಕ್ಷೀರು ಸಂಖ್ಯೆ: 4/2005-06 ದಿನಾಂಕ:3-12-2005 ರಲ್ಲಿ ಜಪ್ತುಪಡಿಸಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2693 ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:25-7-2006 ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2693 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ

ನೀಡಿರುವ ರೆವೆನ್ಯೂ ಡಿಪೋಸಿಟ್‌ನಲ್ಲಿ ಇಟ್ಟಿರುವ ಡಿ.ಡಿ. ಮೊತ್ತ ರೂ.17,000/– ವನ್ನು ಸರಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿಕೊಳ್ಳಲು ಆದೇಶಿಸಿದೆ. ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ ಇವರು ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿ:29-09-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ: 1-** ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಪ್ರಾ.ಸಾ: 2 -** ಶ್ರೀ.ದಿನಕರ, ನಿವೃತ್ತ ಅಬಕಾರಿ ಮುಖ್ಯ ರಕ್ಷಕ, ಕೋಟೆಕಾರ್ ಪೋಸ್ಟ್, ಸೋಮೇಶ್ವರ, ಮಂಗಳೂರು.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರ್ ಪ್ರತಿ

ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–3 : ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಲ್ಲಿರುವ ವರದಿ.

ನಿಶಾನೆ ಪಿ–4 : ಮಾದರಿ ಸೀಲ್

ನಿಶಾನೆ ಪಿ–5 : ಕೆಮಿಕಲ್ ವರದಿ.

ನಿಶಾನೆ ಪಿ–6 : ತನಿಖಾದಿಕಾರಿಯವರ ತನಿಖಾ ವರದಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1025

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/04/ಡಿಟಿಸಿಆರ್/2004–05, ದಿನಾಂಕ:10ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಪಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು, | 1) ಎನ್.ಸಂತೋಷ್ ಕುಮಾರ್, |
| ಇ.ಐ.ಬಿ. , | ಬಿನ್:ಉಕ್ಕುಂದಪ್ಪ, ಶ್ರೀವನ, ಜೆ.ಬಿ.ಲೋಬೋ ರೋಡ್, |
| ದ.ಕ ಮತ್ತು ಉಡುಪಿ ಜಿಲ್ಲೆ. | ಕೊಡಿಕಲ್, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(2), ಇಐಬಿ,ದ.ಕ ಮತ್ತು ಉಡುಪಿ ಜಿಲ್ಲೆ ಇವರು ಅಕ್ರಮ ನಕಲಿ ಮದ್ಯ ತಯಾರಿಕಾ ಘಟಕದ ಬಗ್ಗೆ ಖಚಿತ ವರ್ತಮಾನದ ಮೇರೆಗೆ, ದಿನಾಂಕ 20.6.2005 ರಂದು ರಾತ್ರಿ 9.30 ಗಂಟೆ ಸಮಯದಲ್ಲಿ

ಮಂಗಳೂರು ತಾಲೂಕು ಕೊಂಚಾಡಿ ಗ್ರಾಮದ ದೇರೆಬೈಲ್ ಗೀತಾ ನಗರದ ಲ್ಯಾಂಡ್‌ಲಿಂಕ್ಸ್ ಟೌನ್‌ಶಿಫ್‌ನ 2ನೇ ಮುಖ್ಯ ರಸ್ತೆಯ 6ನೇ ಅಡ್ಡ ರಸ್ತೆಯಲ್ಲಿರುವ ಮನೆ ನಂ: 1–ಹೆಚ್–64 ಮನೆಗೆ ದಾಳಿ ನಡೆಸಿರುತ್ತಾರೆ. ಸದ್ರಿ ಮನೆಯನ್ನು ಶೋಧಿಸಲು ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಸಮಯಾವಕಾಶವಿಲ್ಲದ ಕಾರಣ, ಸ್ಥಳದಲ್ಲಿಯೇ ಶೋಧನೆ ಮಾಡಲು ಕಾರಣಗಳನ್ನು ದಾಖಲಿಸಿ ಶೋಧನಾ ಮೆಮೋ ತಯಾರಿಸಿ ,ಮನೆಯನ್ನು ಪ್ರವೇಶಿಸಿ ಶೋದಿಸಿದಾಗ ಮನೆಯ ಒಳಗೆ ಮದ್ಯ ತಯಾರಿಕಾ ಸಾಮಾಗ್ರಿಗಳಿದ್ದು, ಒಂದು ಕೋಣೆಯಲ್ಲಿ ರಟ್ಟಿನ ಪೆಟ್ಟಿಗೆಗಳು, ಮತ್ತೊಂದು ಕೋಣೆಯಲ್ಲಿ ಬಾಟ್ಲಿಯ ಮುಚ್ಚಳಗಳನ್ನು ಹಾಕಿ ಸೀಲು ಮಾಡುವ ಯಂತ್ರ ಹಾಗೂ ಬಿಳಿ ಕ್ಯಾನುಗಳಲ್ಲಿ ಮದ್ಯ ತುಂಬಿಸಿ ಶೇಖರಿಸಿ ಇಟ್ಟಿರುವುದು ಕಂಡು ಬಂದು, ಸದ್ರಿ ಕ್ಯಾನಿನ ಮುಚ್ಚಳವನ್ನು ತೆರೆದು ನೋಡಿದಾಗ ಅವುಗಳಲ್ಲಿ ಮದ್ಯ ತುಂಬಿಸಿ ಇರುವುದು ಕಂಡು ಬಂದು ಮನೆಯ ಎಡಭಾಗದ ಅಡುಗೆ ಕೋಣೆಯಲ್ಲಿ 5 ಮಂದಿ ಕುಳಿತು ಮದ್ಯ ತುಂಬಿಸಿದ ಬಾಟಲಿಗಳಿಗೆ ಲೇಬಲ್ ಅಂಟಿಸಿ, ಬಾಕ್ಸ್‌ಗಳಲ್ಲಿ ತುಂಬಿಸುತ್ತಿರುವುದು ಪತ್ತೆಯಾಗಿರುತ್ತದೆ. ನಂತರ ಅವರಲ್ಲಿ ಮದ್ಯವನ್ನು ತಯಾರಿಸಿ, ದಾಸ್ತಾನು ಹೊಂದಲು ಯಾವುದೇ ಕಾನೂನುಬದ್ದ ದಾಖಲೆಗಳು ಇವೆಯೇ ಎಂದು ಸದ್ರಿ ವ್ಯಕ್ತಿಗಳನ್ನು ಕೇಳಿದಾಗ ಯಾವುದೇ ದಾಖಲೆಗಳು ಇರುವುದಿಲ್ಲವೆಂದು ತಿಳಿಸಿದ ಮೇರೆಗೆ ಇದೊಂದು ಬೃಹತ್ ಅಕ್ರಮ ನಕಲಿ ಮದ್ಯ ತಯಾರಿಕಾ ಹಾಗೂ ದಾಸ್ತಾನು ಘಟಕವೆಂದು ಖಚಿತಪಡಿಸಿಕೊಂಡು ಮನೆಯ ಪ್ರತಿಯೊಂದು ಕೋಣೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಸೊತ್ತುಗಳನ್ನು ಜಪ್ತು ಪಡಿಸಿಕೊಳ್ಳಲಾಗಿದೆ.

**ಜಪ್ತು ಮಾಡಿದ ಸೊತ್ತುಗಳು:**

1. ಮೈಸೂರ್ ಲ್ಯಾನ್ಸರ್ ವಿಸ್ಕಿ ಎಂಬ ಲೇಬಲ್ ಹಚ್ಚಿದ 750 ಎಂಎಲ್ ಸಾಮರ್ಥ್ಯದ ತಲಾ 12 ಸೀಸೆಗಳಂತೆ ತುಂಬಿದ 21ರಟ್ಟಿನ ಪೆಟ್ಟಿಗೆಗಳಲ್ಲಿದ್ದ ನಕಲಿ ಮದ್ಯ–189 ಲೀ
2. 180 ಎಂಎಲ್ ಸಾಮರ್ಥ್ಯದ ಸೀಸೆಗಳಲ್ಲಿ ತಲಾ 48 ಬಾಟ್ಲಿಗಳಂತೆ ಒಟ್ಟು 13 ರಟ್ಟಿನ ಪೆಟ್ಟಿಗೆಗಳಲ್ಲಿ ಮೈಸೂರ್ ಲ್ಯಾನ್ಸರ್ ವಿಸ್ಕಿ ಎಂಬ ಲೇಬಲ್ ಹಚ್ಚಿದ ನಕಲಿ ಮದ್ಯ – 112.320 ಲೀ
3. 35 ಲೀ ಸಾಮರ್ಥ್ಯದ ಬಿಳಿ ಬಣ್ಣದ 3 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತುಂಬಿದ ಮದ್ಯದ ಮಿಶ್ರಣ –105 ಲೀ
4. 5 ಲೀ. ಸಾಮರ್ಥ್ಯದ ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ ಕಾರಮಿಲ್ ದ್ರಾವಣ– 4 ಲೀ.
5. 5 ಲೀ. ಸಾಮರ್ಥ್ಯದ 3 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲ್ 2 ಲೀ. ನಂತೆ ಇದ್ದ ಎಸೆನ್ಸ್ ದ್ರಾವಣ– 6 ಲೀ.
6. ವಿವಿಧ ಬ್ರಾಂಡ್‌ಗಳ ಬಾಟಲಿಗೆ ಹಚ್ಚುವ ಲೇಬಲ್‌ಗಳು ಸುಮಾರು – 10000
7. ನಕಲಿ ಭದ್ರತಾ ಚೀಟಿಗಳು 4 ಬಂಡಲ್‌ಗಳಲ್ಲಿ ಅಂದಾಜು 40000
8. ಬಿಳಿ ಬಣ್ಣದ ಪ್ಲಾಸ್ಟಿಕ್ ಜೂಲಿ – 1
9. 10 ಪ್ಲಾಸ್ಟಿಕ್ ಚೀಲಗಳಲ್ಲಿ 750 ಎಂ.ಎಲ್. ಸಾಮರ್ಥ್ಯದ ಖಾಲಿ ಪ್ಲಾಸ್ಟಿಕ್ ಬಾಟಲಿಗಳು – 1000
10. 6 ಪ್ಲಾಸ್ಟಿಕ್ ಚೀಲಗಳಲ್ಲಿ 750 ಎಂಎಲ್ ಸಾಮರ್ಥ್ಯದ ಖಾಲಿ ಗಾಜಿನ ಸೀಸೆಗಳು – 300
11. 15 ಪ್ಲಾಸ್ಟಿಕ್ ಚೀಲಗಳಲ್ಲಿ 180 ಎಂಎಲ್ ಸಾಮರ್ಥ್ಯದ ಖಾಲಿ ಗಾಜಿನ 'ಸೀಸೆಗಳು – 1500
12. 3 ರಟ್ಟಿನ ಪೆಟ್ಟಿಗೆಗಳಲ್ಲಿ ವಿವಿಧ ಬ್ರಾಂಡಿನ ಬಾಟಲಿ ಮುಚ್ಚಳಗಳು – 10000
13. ಖಾಲಿ ರಟ್ಟಿನ ಪೆಟ್ಟಿಗೆಗಳು – 200
14. 35 ಲೀ ಸಾಮರ್ಥ್ಯದ ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು – 40
15. 180 ಲೀ ಸಾಮರ್ಥ್ಯದ ತಿಳಿ ಹಸಿರು ಬಣ್ಣದ ಬಿಪಿಎಲ್ ಕಂಪೆನಿಯ ರೆಫ್ರಿಜರೇಟರ್ – 1
16. ಸುಮಾರು 250 ಲೀ ಸಾಮರ್ಥ್ಯದ ತಗಡಿನ ಫಿಲ್ಟರ್ ಡ್ರಮ್ಮು – 1
17. ಪ್ಲಾಸ್ಟಿಕ್ ಟ್ರೇಗಳು – 10
18. 50 ಲೀ ಸಾಮರ್ಥ್ಯದ ಕಪ್ಪು ಬಣ್ಣದ ಪ್ಲಾಸ್ಟಿಕ್ ಫಿಲ್ಟರ್ – 1
19. ಫೈಬರ್ ಸ್ಟೂಲ್‌ಗಳು (ಚಿಕ್ಕದು) – 2
20. ಪ್ಲಾಸ್ಟಿಕ್ ಪೈಪುಗಳು ತುಂಡುಗಳು (ಅಂದಾಜು 2 ಮೀಟರ್ ಉದ್ದ) – 2
21. ಒಂದು ಮರದ ಮೇಜಿಗೆ ಅಳವಡಿಸಿದ ಹ್ಯಾಂಡ್ ಕ್ಯಾಪಿಂಗ್ ಮೀಶಿನ್ – 1
22. ಸುಮಾರು 5.5 ಅಡಿ ಎತ್ತರದ ವಿದ್ಯುತ್ ಚಾಲಿತ ಕ್ಯಾಪಿಂಗ್ ಮೀಶಿನ್ – 1
23. ಪ್ಯಾನಾಸೋನಿಕ್ ಕಂಪೆನಿಯ ಟೇಪ್ ರೇಕಾರ್ಡರ್ – 1

**ಒಟ್ಟು ನಕಲಿ ಮದ್ಯ–406.320 ಲೀಟರು**

24. ಕಪ್ಪು ಬಣ್ಣದ ಮಹೇಂದ್ರ ಕಂಪನಿಯ ನಿರ್ಮಿತ ಸ್ಕೋರ್ಫಿಯೋ ಜೀಫ್ ನಂ: KA-19-P-510 ಇಂಜಿನ್ ನಂ: BF 34449779 ಚಾಸಿಸ್ ನಂ: MAITA 2 BFC 32H 86454ಡೀಸಿಲ್ ಚಾಲಿತ ವಾಹನ_1 ಹಾಗೂ ವಾಹನದಲ್ಲಿದ್ದ ಮದ್ಯ

a) ಒರಿಜಿನಲ್ ಚಾಯ್ಸ್ ವಿಸ್ಕಿ ಎಂಬ ಲೇಬಲ್ ಹಚ್ಚಿದ 750 ಎಂಎಲ್ ಸಾಮರ್ಥ್ಯದ ತಲಾ 12 ಸೀಸೆಗಳಂತೆ ಕಪ್ಪು ಬಣ್ಣದ ಪಾಲಿಥೀನ್ ಚೀಲಗಳಲ್ಲಿ ತುಂಬಿದ 64 ಕಟ್ಟುಗಳಲ್ಲಿ ಇದ್ದ ಒಟ್ಟು ನಕಲಿ ಮದ್ಯ–576 ಲೀಟರ್

b) ಕ್ಯೂಬಾ ಪ್ರೀಮಿಯಂ ರಂ ಎಂಬ ಲೇಬಲ್ ಹಚ್ಚಿದ 750 ಎಂಎಲ್ ಸಾಮರ್ಥ್ಯದ ತಲಾ 12 ಬಾಟಲಿಗಳಂತೆ ಕಪ್ಪು ಬಣ್ಣದ ಪಾಲಿಥೀನ್ ಚೀಲಗಳಲ್ಲಿ ತುಂಬಿದ 9 ಕಟ್ಟುಗಳಲ್ಲಿ ಇದ್ದ ಒಟ್ಟು ನಕಲಿ ಮದ್ಯ–81 ಲೀಟರ್

**ಒಟ್ಟು 657.000 ಲೀಟರ್ ನಕಲಿ ಮದ್ಯ**

ಮೇಲಿನಂತೆ ವಿವರ ನಮೂದಿಸಿರುವ ಸೊತ್ತುಗಳನ್ನು ಹಾಗೂ ಮನೆಯ ಅಂಗಳ ದಲ್ಲಿ ನಕಲಿ ಮದ್ಯ ತುಂಬಿಸಿ ಸರಬರಾಜಿಗಾಗಿ ನಿಲ್ಲಿಸಿದ್ದ ವಾಹನ ಸಂಖ್ಯೆ: ಕೆಎ–19–ಪಿ–510 (ಮಹೀಂದ್ರ ಸ್ಕೋರ್ಪಿಯೋ)ವನ್ನು ಜಪ್ತು ಮಾಡಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13ಎ, 13ಇ, 14ರಂತೆ ಅಪರಾಧ ಮತ್ತು ಸೆಕ್ಷನ್ 32, 34 ಮತ್ತು 38ಎ ಅಡಿಯಲ್ಲಿ ಶಿಕ್ಷಾರ್ಹವಾಗಿರುವುದರಿಂದ, ಅರೋಪಿಗಳಾದ 1) ಸಂಜಯ್ ಎಸ್.ಕೊಕ್ಯಾನ್, ಬಿನ್: ಬಿ.ಎಸ್.ಕುಕ್ಯಾನ್, ಬಿ.1,1ನೇ ಮಹಡಿ, ಸಿಸರ್ಸ್ ಪ್ಯಾಲೇಸ್, ಮೈಕ್ರೊವೆವ್ ಸ್ಟೇಷನ್ ಬಳಿ, ಹ್ಯಾಟ್ ಹಿಲ್ ಮಂಗಳೂರು 2) ಆರ್.ರಾಮ ಬಿನ್: ರಾಜು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಬಳಿ,ತಣ್ಣೀರು ಬಾವಿ, ಅಂಚೆ ಪಣಂಬೂರು,ಮಂಗಳೂರು ತಾಲೂಕು 3) ಶ್ರೀ ಉಮ್ಮರ್ ಫಾರೂಕ್, ಬಿನ್ ಟಿ.ಹಮೀದ್, ರಿಫಾ ಮಂಜಿಲ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳಿ, ತಣ್ಣೀರು ಬಾವಿ, ಅಂಚೆ ಪಣಂಬೂರು, ಮಂಗಳೂರು ತಾಲೂಕು 4) ಮೊಹಮ್ಮದ್ ಇಮ್ರಾನ್, ಬಿನ್ ಟಿ.ಹಮೀದ್ ರಿಫಾ ಮಂಜಿಲ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳಿ, ತಣ್ಣೀರು ಬಾವಿ, ಅಂಚೆ ಪಣಂಬೂರು ,ಮಂಗಳೂರು ತಾಲೂಕು 5) ಶ್ರೀ ಮೊಹಮ್ಮದ್ ರಿಯಾದ್,ಬಿನ್:ಟಿ:ಹಮೀದ್, ರಿಫಾ ಮಂಜಿಲ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳಿ, ತಣ್ಣೀರು ಬಾವಿ,ಅಂಚೆ ಪಣಂಬೂರು ಮಂಗಳೂರು ತಾಲ್ಲೂಕು 6) ಮೊಹಮ್ಮದ್ ಆಶ್ರಫ್,ಬಿನ್:ಟಿ.ಹೆಚ್.ಇದಿನಬ್ಬ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಳಿ, ತಣ್ಣೀರು ಬಾವಿ, ಅಂಚೆ ಪಣಂಬೂರು, ಮಂಗಳೂರು ತಾಲೂಕು ರವರುಗಳನ್ನು ದಸ್ತಗಿರಿ ಮಾಡಿ, ಅರೋಪಿ ವ್ಯಕ್ತಿಗಳ ವಿರುದ್ದ ಪ್ರ.ಮಾ.ವರದಿ ಸಂ:01/2004–05, ದಿ:20–6–05 ರಂತೆ ಮೊಕದ್ದಮೆ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ,ನಕಲನ್ನು ನೊತ್ತು ಪಟ್ಟಿಯೊಂದಿಗೆ ಅಧಿಕೃತ ಅಧಿಕಾರಿಗಳು ಪ್ರಾಧಿಕಾರಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತು ಹಾಗೂ ವಾಹನವನ್ನು ತನಿಖೆ ಮುಗಿಯುವವರೆಗೆ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ಅನುಮತಿಯನ್ನು ಪಡೆದುಕೊಂಡಿರುತ್ತಾರೆ.

ಮೊಕದ್ದಮೆಯ ತನಿಖೆ ಮಾಡಿದ ತನಿಖಾಧಿಕಾರಿಗಳು ಜಪ್ತು ಮಾಡಿದ ಸೊತ್ತುಗಳ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ವರದಿ ಸಂ:ಇ–265, ದಿ:6–7–05 ರಂತೆ ರಾಸಾಯನಿಕ ತಜ್ಞರ ವರದಿ ಪಡೆದುಕೊಂಡಿದ್ದು ಮಾದರಿಗಳಲ್ಲಿ ಮದ್ಯಸಾರದ ಅಂಶ ಪತ್ತೆಯಾಗಿದ್ದು, ಮದ್ಯದಲ್ಲಿ ಮದ್ಯಸಾರದ ಪ್ರಮಾಣ 37.0% ಯಿಂದ 55.0% ವರೆಗೆ ಇರುವುದು ಹಾಗೂ ಕ್ಯಾರಮಲ್ ಮತ್ತು ಎಸೆನ್ಸ್ ದ್ರಾವಣಗಳಲ್ಲಿ ಮಡ್ಡಿ ಕಂಡುಬಂದಿದ್ದು, ಮಾದರಿಗಳು ಧೂಳು ಮತ್ತು ಕಶ್ಮಲಯುಕ್ತವಾಗಿರುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿ ದೃಢೀಕರಿಸಿರುವುದು ಕಂಡು ಬರುತ್ತದೆ. ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ ಮಂಗಳೂರು ಇವರಿಂದ ಪಡೆದು ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ.ಸಂತೋಷ್ ಕುಮಾರ್ ಬಿನ್:ಉಕ್ಕುಂದಪ್ಪ, ಶ್ರವಣ ಪರ್ಮಲಾಡಿ, ಜೆ.ಬಿ.ರಸ್ತೆ, ಕೋಡಿಕಲ್, ಮಂಗಳೂರು ಇವರು ವಾಹನದ ನೋಂದಣಿ ಮಾಲೀಕರಾಗಿರುವುದಾಗಿ ತಿಳಿದುಬಂದಿರುತ್ತದೆ. ಮೊಕದ್ದಮೆಯ ತನಿಖಾಧಿಕಾರಿಗಳು ದಿ:12–8–2005 ರಂತೆ ವರದಿ ಸಲ್ಲಿಸಿ ಮೊಕದ್ದಮೆ ಯಲ್ಲಿ ವಶಪಡಿಸಿಕೊಂಡಿರುವ ಸೊತ್ತುಗಳ ಮಾಲೀಕತ್ವದ ಬಗ್ಗೆ ವಾರಸುದಾರರು ಯಾರೂ ಮುಂದೆ ಬಾರದಿದ್ದುದರಿಂದ, ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಸೊತ್ತುಗಳ ರಾಸಾಯನಿಕ ಮಾದರಿಗಳನ್ನು ಹೊರತು ಪಡಿಸಿ ಉಳಿದ ಸೊತ್ತುಗಳನ್ನು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲು ಹಾಗೂ ಮದ್ಯವನ್ನು ನಾಶಪಡಿಸಲು ಅದೇಶಕ್ಕಾಗಿ ಕೋರಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ.ಜಿಲ್ಲೆ ಮಂಗಳೂರು ಇವರ ಮುಟ್ಟುಗೋಲು ಆದೇಶ ಸಂ: ಇಐಬಿ:04:ಡಿಟಿಸಿಆರ್:2004–05, ದಿ4–1–2006ರ ಆದೇಶದಲ್ಲಿ ವಶಪಡಿಸಿ ಕೊಂಡ ಸೊತ್ತುಗಳ ಪೈಕಿ ವಾಹನ ಹೊರತು ಪಡಿಸಿ, ಇತರೆ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯ, ಬಲ್ಕ್ ಮದ್ಯ, ಎಸೆನ್ಸ್,ಕ್ಯಾರೆಮೆಲ್ ಇತ್ಯಾದಿ ಸೊತ್ತುಗಳನ್ನು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ,ಮಂಗಳೂರು ಇವರ ಸಮಕ್ಷಮದಲ್ಲಿ ನಾಶಪಡಿಸಲು ಹಾಗೂ ಬೆಲೆ ಬರುವ ಸೊತ್ತುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶಿಸಲಾಗಿರುತ್ತದೆ.

ವಾಹನದ ನೊಂದಾಣಿ ಮಾಲೀಕರಾದ ಶ್ರೀ ಎನ್. ಸಂತೋಷ್ ಕುಮಾರ್, ಬಿನ್ ಉಕ್ಕುಂದಪ್ಪ, ಶ್ರೀವನ, ಜೆ.ಬಿ.ಲೋಬೋ ರೋಡ್, ಕೋಡಿಕಲ್,ಮಂಗಳೂರು ಇವರ ಜಿ.ಪಿ.ಎ ಹೊಂದಿರುವ ಶ್ರೀ ಹೆಚ್.ಮಾರುತಿ ರಾವ್, ಬಿನ್: ಹೆಚ್.ಹನುಮಂತರಾವ್, ಆಶ್ರಯ ನಿಲಯ, ವಿವೇಕಾನಂದ ನಗರ, ಪಂಜಿಮೊಗರು ಗ್ರಾಮ, ಮಂಗಳೂರು ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:16–7–2005ರಂದು ಅರ್ಜಿ ಸಲ್ಲಿಸಿ, ವಾಹನವನ್ನು ಕಂತು ಪಾವತಿ ಷರತ್ತಿನಲ್ಲಿ ಖರೀದಿಸಿದಾಗಿ ಹಾಗೂ ದಿ:18–6–2005ರಂದು ತನ್ನ ಮಿತ್ರನಾದ ಸಂಜಯ್ ಕುಕ್ಕಾನ್ ಇವರಿಗೆ ಅಗತ್ಯ ಕೆಲಸಕ್ಕಾಗಿ

ವಾಹನವನ್ನು ನೀಡಿರುವುದಾಗಿ, ಸದ್ರಿಯವರು ವಾಹನವನ್ನು ಪಡೆದುಕೊಂಡ ಮೇಲೆ ಈ ಕೃತ್ಯ ಎಸಗಿರುವುದಾಗಿ ತಿಳಿಸಿ,ತಾನು ಉದ್ದೇಶಪೂರ್ವಕವಾಗಿ ವಾಹನವನ್ನು ಈ ಕೃತ್ಯದಲ್ಲಿ ಬಳಸಿರುವುದಿಲ್ಲವೆಂದು ತಿಳಿಸಿ ವಾಹನದ ಮಧ್ಯಂತರಬಿಡುಗಡೆಗಾಗಿ ವಿನಂತಿಸಿಕೊಂಡಿರುತ್ತಾರೆ. ಸದ್ರಿ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಅಧಿಕೃತ ಅಧಿಕಾರಿಗಳ ಪ್ರಾಧಿಕಾರದ ದಿ:28-9-2005 ರಂದು ಹೊರಡಿಸಿದ ಆದೇಶದಲ್ಲಿ ವಾಹನದ ಮೌಲ್ಯಕ್ಕೆ ಸಮನಾವಾದ ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸುವ ಆಧಾರದ ಮೇಲೆ ವಾಹನದ ಮದ್ಯಂತರ ಬಿಡುಗಡೆಗೆ ಆದೇಶಿಸಲಾಗಿರುತ್ತದೆ.

ಆ ಪ್ರಕಾರ ವಾಹನದ ಮಾಲೀಕರು ರೂ.4,85,000/- ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಗ್ಯಾರೆಂಟಿ ಸಂ: 7/2005 ದಿ:3-10-2005ನ್ನು ಕೆನರಾ ಬ್ಯಾಂಕ್, ಮಾರ್ಕೆಟ್ ರೋಡ್, ಮಂಗಳೂರು ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಒಪ್ಪಿಸಿ ವಾಹನವನ್ನು ಮದ್ಯಂತರ ಸುಪರ್ಧಿಗೆ ಪಡೆದುಕೊಂಡಿರುತ್ತಾರೆ.

ವಾಹನದ ನೊಂದಾಣಿ ಮಾಲೀಕರಾದ ಶ್ರೀ.ಎನ್. ಸಂತೋಷ್ ಕುಮಾರ್, ಬಿನ್ ಉಕ್ಕುಂದಪ್ಪ, ಶ್ರವಣ, ಜೆ.ಬಿ. ಲೋಬೋ ರೋಡ್, ಕೋಡಿಕಲ್,ಮಂಗಳೂರು, ಜಿ.ಪಿ.ದಾರರಾದ ಶ್ರೀ.ಹೆಚ್.ಮಾರುತಿರಾವ್, ಬಿನ್ ಹೆಚ್.ಹನುಮಂತರಾವ್, ಆಶ್ರಯ ನಿಲಯ, ವಿವೇಕಾನಂದ ನಗರ, ಪಂಜಿಮೊಗರು ಗ್ರಾಮ, ಮಂಗಳೂರು, ವಾಹನದ Hire Purchaser M/s. GE Countrywide Consumer Financial Service Ltd., ಮತ್ತು ಇತರ ಆರೋಪಿತ ವ್ಯಕ್ತಿಗಳಿಗೆ ಈ ಪ್ರಾಧಿಕಾರದಿಂದ ದಿ:12-9-2005ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ರಂತೆ ಕಾರಣ ಕೇಳಿ ನೋಟಿಸನ್ನು ನೊಂದಾಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸಿಗೆ ಪ್ರಕರಣದ ಮುಖ್ಯ ಆರೋಪಿತ ವ್ಯಕ್ತಿಯಾದ ಶ್ರೀ.ಸಂಜಯ್ ಎಸ್.ಕುಕ್ಕಾನ್ ಮತ್ತು ಇತರರು ದಿ:04-10-2005ರಂದು ಉತ್ತರಿಸುತ್ತಾ ಸದ್ರಿ ವಾಹನವನ್ನು GE Countrywide Consumer Financial Service Ltd., ಇವರಿಂದ ಸಾಲದ ಮೇಲೆ ಪಡೆಯಲಾಗಿದ್ದು, ವಾಹನವನ್ನು ಮುಟ್ಟುಗೋಲು ಹಾಕಿಕೊಂಡ ಪಕ್ಷದಲ್ಲಿ ವಾಹನದ ಕಂತನ್ನು ಪಾವತಿಸಲು ಅನಾನೂಕೂಲವಾಗುವ ಕಾರಣ ಹಾಗೂ ವಾಹನವನ್ನು ಉದ್ದೇಶಪೂರ್ವಕವಾಗಿ ಅಕ್ರಮದಲ್ಲಿ ಬಳಸಿಕೊಂಡಿರುವುದಿಲ್ಲ ಎಂದು ತಿಳಿಸಿ,ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಶಾಶ್ವತವಾಗಿ ಬಿಡುಗಡೆ ಮಾಡಿಕೊಡಬೇಕೆಂದು ಕೋರಿಕೊಂಡಿರುತ್ತಾರೆ. ಹಾಗೂ ವಾಹನದ ನೊಂದಾಣಿ ಮಾಲೀಕರಿಗೆ ಮತ್ತು ಹೆಚ್.ಪಿ.ದಾರರಿಗೆ ಕಳುಹಿಸಲಾದ ನೋಟಿಸು Unclaimed ಎಂಬ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಮತ್ತು ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ಕಳುಹಿಸಲಾದ ಕಾರಣ ಕೇಳಿ ನೋಟಿಸು ಕ್ರ.ಸಂ:2ರ ವ್ಯಕ್ತಿಗೆ ಜ್ಯಾರಿ ಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿದ್ದು, ಉಳಿದಂತೆ ಎಲ್ಲಾ ಆರೋಪಿತ ವ್ಯಕ್ತಿಗಳಿಗೆ ಕಳುಹಿಸಿದ ಕಾರಣ ಕೇಳಿ ನೋಟಿಸುಗಳು ಜ್ಯಾರಿಯಾಗಿರುತ್ತದೆ. ಅವರಿಂದ ಸದ್ರಿ ಕಾರಣ ಕೇಳಿ ನೋಟಿಸಿಗೆ, ಈ ಪ್ರಾಧಿಕಾರಕ್ಕೆ ಉತ್ತರ ಸಲ್ಲಿಸಲಾಗಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣದ ಫಿರ್ಯಾದುದಾರರು ಹಾಗೂ ಪ್ರಕರಣದ ತನಿಖೆ ಕೈಗೊಂಡ ಅಬಕಾರಿ ಉಪ ನಿರೀಕ್ಷಕರು ಇವರನ್ನು ಪ್ರಾಸಿಕ್ಯೂಶನ್ ಸಾಕ್ಷಿ ನಂ:1 ಮತ್ತು ಪ್ರಕರಣದಲ್ಲಿ ಮಾಧರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕೊಂಡೊಯ್ಯದ ಅಬಕಾರಿ ರಕ್ಷಕರು ಇವರು ಪ್ರಾಸಿಕ್ಯೂಶನ್ ಸಾಕ್ಷಿ ನಂ.2 ಆಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಅಭಿಯೋಗದ ಪರ ಹಾಗೂ ರಕ್ಷಣಾ ಪರ ವಾದ ವಿವಾದವನ್ನು ಆಲಿಸಿ, ಪ್ರಾಧಿಕಾರಕ್ಕೆ ಸಲ್ಲಿಸಿರುವ ದಾಖಲಾತಿಗಳು, ಪ್ರಾಸಿಕ್ಯೂಶನ್ ಪರ ನೀಡಿರುವ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾಧಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾಧಾಂಶಗಳು**

1. ದಿನಾಂಕ:20-6-2005ರಂದು ಮಹೀಂದ್ರ ಸ್ಕಾರ್ಪಿಯೋ ಜೀಪು ಸಂ:KA-19-P-510 ರಲ್ಲಿ ಅಕ್ರಮ ಮದ್ಯ ತಯಾರಿಕಾ ಘಟಕದಿಂದ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಮದ್ಯವನ್ನು ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ-1:**

ಶ್ರೀ.ಎನ್.ಶಿವರಾಮ ಶೆಟ್ಟಿ.ಎನ್,ಅಬಕಾರಿ ಉಪ ನಿರೀಕ್ಷಕರು, ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರು ದಿನಾಂಕ: 26-4-2007ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ದಿನಾಂಕ:26-5-2005 ರಿಂದ ತಾನು

ಇಲ್ಲಿವರೆಗೆ ಮಂಗಳೂರು ಇಐಬಿ ಕಛೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ: 20–6–2005ರಂದು ಅಬಕಾರಿ ಅದೀಕ್ಷಕರು ಹಾಗೂ ಸಿಬ್ಬಂದಿ ಯೊಂದಿಗೆ ತಾನು ಕೊಂಚಾಡಿ ಗ್ರಾಮದ ದೇರೆಬೈಲ್‌ನ ಲ್ಯಾಂಡ್ ಲಿಂಕ್ಸ್ ಟೌನ್‌ಶಿಫ್‌ನ 6ನೇ ಅಡ್ಡ ರಸ್ತೆಯಲ್ಲಿರುವ, ಈ ಮೊದಲು ಮಾಹಿತಿ ಇದ್ದ ಒಂದು ಮನೆ ನಂ:1 ಹೆಚ್–64ರ ನಂಬರಿನ ಮನೆಯೊಳಗೆ 2 ಜನ ಪಂಚರೊಂದಿಗೆ ಹೋದೆವು, ಮನೆಯ ಹತ್ತಿರ ಹೋಗುವ ಸಂಧರ್ಭದಲ್ಲಿ ನಮಗೆ ಬಾಟ್ಲಿಗಳಿಗೆ ಸೀಲು ಮಾಡುವ ಶಬ್ದ ಕೇಳಿಸಿತು, ನಾವು ಸದ್ರಿ ಮನೆಯ ಹತ್ತಿರ ಹೋದಾಗ ಮನೆಯ ಕಿಟಿಕಿಯಿಂದ ಒಬ್ಬ ವ್ಯಕ್ತಿ ಇಣಿಕಿ ನೋಡುತ್ತಿದ್ದ. ನಾವು ಸದ್ರಿ ವ್ಯಕ್ತಿಯನ್ನು ವಿಚಾರಿಸಿ ಮನೆಯೊಳಗೆ ಏನು ಮಾಡುತ್ತಿದ್ದೀರಿ ಎಂದು ಕೇಳಿಕೊಂಡೆವು. ಸದ್ರಿ ವ್ಯಕ್ತಿ ಮೌನವಾಗಿದ್ದ ಮನೆಯೊಳಗಿನಿಂದ ಘಾಟು ವಾಸನೆ ಬರುತ್ತಿತ್ತು. ಈ ಕಾರಣದಿಂದ ಒಳಗಡೆ ಅಕ್ರಮವಾಗಿ ಯಾವುದೋ ಚಟುವಟಿಕೆ ನಡೆಯುತ್ತಿದೆ ಎಂದು ಗ್ರಹಿಸಿ ಮುಂದಿನ ಕ್ರಮ ಜರುಗಿಸಿದೆವು. ಮನೆಯನ್ನು ಶೋಧಿಸಲು ನ್ಯಾಯಾಲಯದಿಂದ ವಾರೆಂಟನು ಪಡೆದುಕೊಳ್ಳುವರೇ ಸಮಯಾವಕಾಶ ಇಲ್ಲದ್ದಿದರಿಂದ ಈ ಕುರಿತು ಒಂದು ವರದಿಯನ್ನು ತಯಾರಿಸಿದೆನು. ನಮ್ಮೊಂದಿಗಿದ್ದ ಪಂಚರಿಗೂ ತಿಳಿಸಿದೆನು. ಸದ್ರಿ ಶೋಧನಾ ವಾರೆಂಟನ್ನು ನೋಡಿದೆನು. ಅದನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ನಂತರ ಮನೆಯನ್ನು ಶೋಧಿಸಲು ಒಳಗೆ ಹೋದೆವು ,ಮನೆಯ ಒಳಗೆ ಎಲ್ಲಾ ಕೋಣೆಗಳಲ್ಲಿ ಖಾಲಿ ಬಾಟ್ಲಿಗಳು, ಬಾಟ್ಲಿಗಳಿಗೆ ಸೀಲು ಮಾಡುವ ಯಂತ್ರ, ಬಾಟ್ಲಿಯ ಮುಚ್ಚಳಗಳು, ರಟ್ಟಿನ ಪೆಟ್ಟಿಗೆಗಳು, ಲೇಬಲ್‌ಗಳು, 1 ಸ್ಟೀಲು ಡ್ರಮ್, 3 ಕ್ಯಾನುಗಳಲ್ಲಿ ದ್ರಾವಣಗಳು ಇತ್ತು. ಲಿಕ್ಕರ್ ಬಾಟ್ಲಿ ತುಂಬಿದ ರಟ್ಟಿನ ಪೆಟ್ಟಿಗೆಗಳು, ಬಿಳಿ ಖಾಲಿ ಕ್ಯಾನುಗಳು, 3 ಕ್ಯಾನ್‌ಗಳಲ್ಲಿ ಮದ್ಯ ಇತ್ತು. 1 ಫ್ರಿಜ್ಜ್, ಪಾನಾಸೋನಿಕ್ ಟೆಪರೆರ್ಕಾಡರ್ ಇದ್ದವು. 750 ಮಿಲಿ ಗಾತ್ರದ ತಲಾ 12 ಬಾಟ್ಲಿಗಳಂತೆ ಒಟ್ಟು 21 ರಟ್ಟಿನ ಪೆಟ್ಟಿಗೆಗಳಿದ್ದು, ಸದ್ರಿ ಬಾಟಲಿಗಳ ಮೇಲೆ ಮೈಸೂರು ಲಾನ್ಸರ್ ವಿಸ್ಕಿ ಎಂಬ ಲೇಬಲ್ ಹಚ್ಚಿದ ನಕಲಿ ವಿಸ್ಕಿ ಇತ್ತು. 180 ಮಿಲಿ ಗಾತ್ರದ ತಲಾ 48 ಬಾಟ್ಲಿಯಂತೆ ಒಟ್ಟು 13 ರಟ್ಟಿನ ಪೆಟ್ಟಿಗೆಗಳಲ್ಲಿ ಅವುಗಳ ಮೇಲೆ ಮೈಸೂರು ಲ್ಯಾನ್ಸರ್ ಎಂಬ ಲೇಬಲ್ ಹಚ್ಚಿದ ನಕಲಿ ವಿಸ್ಕಿ ಇತ್ತು. 4ನೇ ಕೋಣೆಯಲ್ಲಿ ಒಟ್ಟು 35 ಲೀ. ಸಾರಾಯಿ, 3 ಕ್ಯಾನುಗಳಲ್ಲಿ ನಕಲಿ ಮದ್ಯ ಇತ್ತು. 10 ಟ್ರೇಗಳು ಇದ್ದವು. 50 ಲೀ ಸಾಮರ್ಥ್ಯದ ಒಂದು ಕಪ್ಪು ಪಿಲ್ವರ್ ಇತ್ತು. 2 ಫೈಬರ್ ಸ್ಟೂಲ್, 2 ಪ್ಲಾಸ್ಟಿಕ್ ಪೈಪುಗಳು, 1 ಜೂಲಿ ಇತ್ತು. 15ಲೀ ಸಾಮರ್ಥ್ಯದ ಬಿಳಿ ಕ್ಯಾನಿನಲ್ಲಿ ಕ್ಯಾರೆಮಲ್ ದ್ರಾವಣ, 5ಲೀ.ಸಾಮರ್ಥ್ಯದ 3 ಕ್ಯಾನುಗಳಲ್ಲಿ ತಲಾ 2ಲೀ ನಂತೆ ಎಸೆನ್ಸ್ ಇತ್ತು. ಕೈಯಿಂದ ಬಾಟ್ಲಿಗಳಿಗೆ ಮುಚ್ಚಳ ಹಾಕುವ ಯಂತ್ರ–1 ಇತ್ತು,ಇನ್ನೊಂದು ವಿಧ್ಯುತ್‌ಚಾಲಿತ 5 ಅಡಿ ಎತ್ತರದ ಕ್ಯಾಪಿಂಗ್ ಮಿಶಿನ್ ಇತ್ತು. 1 ಪ್ಯಾನ್‌ಸೊನಿಕ್ ಟೇಪುರೇರ್ಕಾಡ್ ಇತ್ತು, 5 ಜನ ಅಡುಗೆ ಮನೆಯ ಕೋಣೆಯಲ್ಲಿ ಕುಳಿತು ಬಾಟ್ಲಿಗಳಿಗೆ ಲೇಬಲನ್ನು ಅಂಟಿಸುತ್ತಿದ್ದರು. ಮನೆಯ ಮುಂದೆ ಒಂದು ಮಹೀಂದ್ರ ಸ್ಕಾರ್ಪಿಯೋ ಜೀಪು ನಿಂತಿತ್ತು. ಅದರಲ್ಲಿದ್ದ ವ್ಯಕ್ತಿಯನ್ನು ವಿಚಾರಿಸಲಾಗಿ ಸದ್ರಿ ವಾಹನವು ನಮಗೆ ಸಂಬಂಧಿಸಿದ್ದು ಎಂದು ಹೇಳಿದರು. ಅನುಮಾನಗೊಂಡು ಸದ್ರಿ ಜೀಪನ್ನು ಪರಿಶೀಲಿಸಿದೆವು. ಸದ್ರಿ ಜೀಪಿನಲ್ಲಿ ಪಾಲಿಥೀನ್ ಬ್ಯಾಗಿನ ಕಟ್ಟುಗಳು ಕಂಡು ಬಂದವು. ಪರಿಶೀಲಿಸಿ ನೋಡಲಾಗಿ ಪ್ರತಿಯೊಂದು ಕಟ್ಟಿನಲ್ಲಿ 12 ಬಾಟ್ಲಿಗಳಂತೆ 64 ಕಟ್ಟುಗಳು ಇದ್ದವು. ಅದರಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ ಎಂಬ ಲೇಬಲನ್ನು ಅಂಟಿಸಲಾಗಿತ್ತು. ಪ್ರತಿಯೊಂದು ಕಟ್ಟಿನಲ್ಲಿ 12 ಬಾಟ್ಲಿಗಳಂತೆ ಒಟ್ಟು 9 ಕಟ್ಟುಗಳು ಇದ್ದವು. ಸದ್ರಿ ಬಾಟ್ಲಿಗಳ ಮೇಲೆ ಕ್ಯೂಬಾ ಪ್ರೀಮಿಯಂ ರಂ ಎಂದು ಲೇಬಲ್ ಅಂಟಿಸಲಾಗಿತು, ಸದ್ರಿ ಜೀಪು ಮಹೀಂದ್ರ ಕಂಪೆನಿಯ ಸ್ಕಾರ್ಪಿಯೋ ಕಪ್ಪು ಬಣ್ಣದಾಗಿದ್ದು, ಅದರ ಮೇಲೆ ನೊಂದಣಿ ಸಂ:KA-19-P-510 ಎಂದು ಫಲಕವಿತ್ತು, ಸದ್ರಿ ಜೀಪಿನಲ್ಲಿ ಒಟ್ಟು ಮದ್ಯ 657.000 ಲೀ. ಇತ್ತು. ನಂತರ ಮೈಸೂರು ಲ್ಯಾನ್ಸರ್ ವಿಸ್ಕಿಯ ಲೇಬಲ್ ಅಂಟಿಸಿದ ಬಾಟಲಿಗಳಿಂದ 750 ಮಿಲಿಯ 1 ಬಾಟಲಿ ಮತ್ತು ಅದೇ ಲೇಬಲ್ ಸಂಬಂಧಿಸಿದ 180 ಮಿಲಿಯ 1 ಬಾಟ್ಲಿ, ಕ್ಯೂಬಾ ಪ್ರೀಮಿಯಂ ರಂ ಎಂದು ಲೇಬಲ್ ಇರುವ 750 ಎಂಎಲ್‌ನ 1 ಬಾಟ್ಲಿ, ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ ಎಂದು ಲೇಬಲ್ ಇರುವ 750 ಮಿಲಿಯ 1 ಬಾಟಲಿ ಮತ್ತು ಕ್ಯಾನ್ ನಲ್ಲಿದ್ದ ಮದ್ಯದಿಂದ 750 ಎಂಎಲ್ ಗಾತ್ರದ 3 ಬಾಟಲಿಗಳಲ್ಲಿ, ಎಸೆನ್ಸ್ ತುಂಬಿದ 3 ಕ್ಯಾನ್ ಗಳಿಂದ ತಲಾ 180 ಮಿಲಿಯ 1ಬಾಟಲಿಯಂತೆ ಒಟ್ಟು 3 ಬಾಟ್ಲಿಗಳಲ್ಲಿ ಮತ್ತು ಕ್ಯಾರೆಮಲ್ ತುಂಬಿದ ಕ್ಯಾನ್‌ನಿಂದ 1 ಬಾಟಲಿಯನ್ನು ಮಾದರಿಗಾಗಿ ತಯಾರಿಸಿದೆವು. ಎಲ್ಲಾ ಮಾದರಿ ಬಾಟ್ಲಿಗಳಿಗೆ ಸೀಲ್ ಮಾಡಿ ಇಲಾಖಾ ಮೊಹರು ಮುದ್ರಿಸಿದೆವು. ಸದ್ರಿ ಬಾಟಲಿಗಳಿಗೆ ನಮ್ಮ ಹಾಗೂ ಪಂಚರ ಸಹಿ ಇರುವ ಚೀಟಿಗಳನ್ನು ಅಂಟಿಸಿದೆವು. ಆರೋಪಿತರನ್ನು ವಿಚಾರಿಸಿ ಪಾಸ್ (ಪರ್ಮಿಟ್) ಬಗ್ಗೆ ಕೇಳಲಾಗಿ ಅವರಲ್ಲಿ ಯಾವುದೇ ದಾಖಲೆ ಇರಲಿಲ್ಲ. ಅಲ್ಲಿ ಸ್ಥಳದಲ್ಲಿ ಒಟ್ಟು 6 ಜನ ಆರೋಪಿತರು ಇದ್ದರು ಸ್ಥಳದಲ್ಲಿ ಒಂದು ವಿವರವಾದ ಮಹಜರನ್ನು ತಯಾರಿಸಿದೆವು. ತಯಾರಿಸಿದ ಮಹಜರು ಮೂಲ ಪ್ರತಿಯು ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಇದ್ದು ಅದರ ಪ್ರತಿಯನ್ನು ಈ ಪ್ರಕರಣದಲ್ಲಿ ಹಾಜರುಪಡಿಸಿರುತ್ತೇನೆ. ಅದನ್ನು ನಿಶಾನೆ ಪಿ–2 ಎಂದು ಗುರುತಿಸಲಾಯಿತು. ಸ್ಥಳದಲ್ಲಿ ಎಲ್ಲಾ ಸೊತ್ತುಗಳನ್ನು ಹಾಗೂ ಆರೋಪಿತರನ್ನು ವಶಕ್ಕೆ ತೆಗೆದುಕೊಂಡೆನು, ನಂತರ ನಮ್ಮ ಕಚೇರಿಯಲ್ಲಿ ಒಂದು ಪ್ರಕರಣವನ್ನು ದಾಖಲಿಸಿ, ಪ್ರ.ಮಾ.ವರದಿಯನ್ನು ತಯಾರಿಸಿ ನ್ಯಾಯಾಲಯಕ್ಕೆ ಹಾಗೂ ಪ್ರತಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಿದೆನು. ಪ್ರ.ಮಾ.ವರದಿ ಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ದಿ:1–7–2005ರಂದು ಈ ಪ್ರಕರಣದ ಮಾದರಿ ಸೀಸೆಗಳನ್ನು ಅಬಕಾರಿ ರಕ್ಷಕ ಪಿ ರಾಜ ಇವರ ಮುಖಾಂತರ ರಾಸಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ. ವಾಹನದ ಮಾಲಿಕತ್ವದ ಬಗ್ಗೆ ಮಾಹಿತಿ ಕೋರಿ ಆರ್.ಟಿ.ಒ ಕಛೇರಿಗೆ ಪತ್ರ ಬರೆದೆನು. ದಿ:11–7–2005ರಂದು ರಾಸಾಯನ ತಜ್ಞರ ವರದಿಯು

ತಲುಪಿರುತ್ತದೆ. ಸದ್ರಿ ವರದಿಯ ಪ್ರತಿಯನ್ನು ಈಗ ನೋಡಿದೆನು. ಅದನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ಅದೇ ದಿನ ಅರ್.ಟಿ.ಒ ಕಛೇರಿ ಮಂಗಳೂರು ಇವರಿಂದ ಬಿ ವಹಿ ತಲುಪಿರುತ್ತದೆ. ಸದ್ರಿ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು. ಅಧಿಕೃತ ಅಧಿಕಾರಿಗಳಿಗೆ ಒಂದು ವರದಿಯನ್ನು ದಿ:21–6–05 ರಂದು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿದೆನು. ಅದನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಪ್ರಕರಣದ ಕಡತವನ್ನು ಮುಂದಿನ ತನಿಖೆಗಾಗಿ ಮಂಗಳೂರು ಉತ್ತರ ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಸದ್ರಿ ದಿನಾಂಕದಂದು ವಾಹನ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಯಾರೂ ಹಾಜರಾಗದೇ ಇದ್ದುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು. ನಂತರ ದಿ:24–9–2008ರಂದುಈ ಪ್ರಕರಣದಲ್ಲಿ ಮುಖ್ಯ ಸಾಕ್ಷಿದಾರರಾದ ಪಿಡಬ್ಲ್ಯೂ–1 ಆದ ಶ್ರೀ.ಶಿವರಾಮ ಶೆಟ್ಟಿ ಇವರು ದಿ:26–4–2007ರಂದು ನೀಡಿದ ಮುಖ್ಯ ಸಾಕ್ಷಿ ವಿಚಾರಣೆಗೆ ಪಾಟೀ ಸವಾಲನ್ನು ರಕ್ಷಣಾ ಪರ ವಕೀಲರು ನಡೆಸಲಾಗಿ ಸದ್ರಿ ಪಾಟೀ ಸವಾಲಿಗೆ ಸಾಕ್ಷಿದಾರರು ಉತ್ತರಿಸುತ್ತಾ–

ನನಗೆ ತಕ್ಷೀರಿನ ವರ್ತಮಾನ ತಿಳಿದಿತ್ತು. ನನಗೆ ರಾತ್ರಿ ಸುಮಾರು 7 ಗಂಟೆ ನಂತರ ವರ್ತಮಾನ ತಿಳಿದಿರುತ್ತದೆ, ನಾನು ಅಪರಾಧ ಸ್ಥಳಕ್ಕೆ ಹೋದಾಗ ನನ್ನೊಂದಿಗೆ ಒಬ್ಬರು ಅಬಕಾರಿ ನಿರೀಕ್ಷಕರು ಮತ್ತು ಸುಮಾರು 12 ಜನ ರಕ್ಷಕ ಸಿಬ್ಬಂಧಿಯವರು ಬಂದಿರುತ್ತಾರೆ, ಆ ದಿವಸ ನಮ್ಮ ಮೇಲಾಧಿಕಾರಿಗಳಾದ ಅಬಕಾರಿ ಅಧೀಕ್ಷಕರು ಶ್ರೀ.ಸೋಮಯ್ಯನವರು ನಮ್ಮ ತಂಡದೊಂದಿಗೆ ಇದ್ದರು. ತಕ್ಷೀರಿನ ವರ್ತಮಾನ ಮಾಹಿತಿ ನನಗೆ ಬಂದಿರುತ್ತದೆ. ತಕ್ಷೀರು ಸ್ಥಳವು ನಮ್ಮ ಮಂಗಳೂರಿನ ಉರ್ವಸ್ಟೋರ್‌ನಲ್ಲಿ ಇದ್ದ ಕಛೇರಿಯಿಂದ ಸುಮಾರು 4 ಕಿ.ಮೀ ದೂರ ಇರಬಹುದು. ನಾವು ಆ ದಿವಸ ಕಛೇರಿಯಿಂದ ಸುಮಾರು 8 ಗಂಟೆ ರಾತ್ರಿ ಹೋಗಿದ್ದೇವು. ನಾವು ತಕ್ಷೀರು ಸ್ಥಳ ತಲುಪಿದಾಗ ಸುಮಾರು ರಾತ್ರಿ 9–30 ಗಂಟೆ ಅಗಿರುತ್ತದೆ. ನಾವು ತಕ್ಷೀರು ಸ್ಥಳಕ್ಕೆ ನೇರವಾಗಿ ಹೋಗಿರುತ್ತೇವೆ. ನಾವು ಹೋಗಲಾಗಿ ತಕ್ಷೀರು ಸ್ಥಳದಲ್ಲಿದ್ದ ಮನೆಯ ಬಾಗಿಲು ಸ್ವಲ್ಪ ತೆರೆದಿರುತ್ತದೆ. ತಕ್ಷೀರು ಸ್ಥಳದಲ್ಲಿ ಧಾಳಿಯ ಮುಂದಾಳ್ವವನ್ನು ನಾನು ವಹಿಸಿರುತ್ತೇನೆ. ತಕ್ಷೀರು ಸ್ಥಳದ ಮನೆಯನ್ನು ಪರಿಶೀಲಿಸಿದಾಗ ಒಟ್ಟು 6 ಜನ ಗಂಡಸರು ಹಾಜರಿದ್ದರು. ಆ ಮನೆಯಲ್ಲಿ ಅಡುಗೆ ಮನೆ ಸೇರಿದಂತೆ 4 ಕೋಣೆ ಗಳಿದ್ದವು. ತಕ್ಷೀರು ಸ್ಥಳದಲ್ಲಿದ್ದ ಮನೆಯ ಸಮೀಪದ ಅಕ್ಕ ಪಕ್ಕದಲ್ಲಿ 2 ಮನೆಗಳು ಇರುತ್ತದೆ. ಸದ್ರಿ ಹೋದ ತಕ್ಷೀರು ಸ್ಥಳದ ಮನೆಗೆ ಪ್ರತ್ಯೇಕ ಗೇಟು ಮತ್ತು ಕಂಪೌಂಡುಗಳು ಇದ್ದವು. ಸದ್ರಿ ಮನೆಗೆ ಹೋಗುವ ಗೇಟು ತೆರೆದಿರುತ್ತದೆ. ನಾವು ತಕ್ಷೀರು ಸ್ಥಳದಲ್ಲಿ 9–30ರಿಂದ 11–30 ರವರೆಗೆ ಇದ್ದೆವು. ತಕ್ಷೀರು ಸ್ಥಳದಲ್ಲಿ ತಯಾರಿಸಿದ ಮಹಜರಿಗೆ ನಾನು ಮತ್ತು ಕೆಲ ಸಿಬ್ಬಂಧಿಯವರು ಸಹಿ ಮಾಡಿದ್ದು ನಮ್ಮ ಮೇಲಾಧಿಕಾರಿಗಳು ಸಹಿ ಮಾಡಿರುವುದಿಲ್ಲ. ನಾವು ತಯಾರಿಸಿದ ಮಹಜರಿನ ಬರವಣಿಗೆ ಶ್ರೀಮತಿ.ಸಂಧ್ಯಾ ಭಟ್ ಇವರಿಂದ ಮಾಡಲಾಗಿರುತ್ತದೆ. ಆದರೆ ಅವರು ಮಹಜರಿಗೆ ಸಹಿ ಮಾಡಿರುವುದಿಲ್ಲ. ನಾವು ಮಹಜರು ಜರುಗಿಸಿದ ಸಂದರ್ಭ ದಲ್ಲಿ ಬೇರೆಯವರು ಯಾರೂ ಬಂದಿರುವುದಿಲ್ಲ. ನಾವು ಸ್ಥಳೀಯ ಯಾರನ್ನು ತಕ್ಷೀರು ಸ್ಥಳಕ್ಕೆ ಬರಮಾಡಿಕೊಂಡಿರುವುದಿಲ್ಲ. ನಾವು ತಕ್ಷೀರು ಸ್ಥಳದಲ್ಲಿ ಮನೆಯಂಗಳದಲ್ಲಿ ನಿಲ್ಲಿಸಿದ್ದ ವಾಹನವನ್ನು ಮನೆ ನಿರೀಕ್ಷಿಸುವ ಪೂರ್ವದಲ್ಲಿ ಶೋಧನೆ ಮಾಡಿರುವುದಿಲ್ಲ.ಸದ್ರಿ ತಕ್ಷೀರಿನಲ್ಲಿ ಜಪ್ತು ಮದ್ಯದಿಂದ ತೆಗೆಯಲಾದ ರಾಸಾಯನಿಕ ಮಾದರಿಗಳನ್ನು ನಾನೇ ರಾಸಯನಿಕ ವಿಶ್ಲೇಷಕರಿಗೆ ಕಳುಹಿಸಿಕೊಟ್ಟಿರುತ್ತೇನೆ. ತಕ್ಷೀರಿಗೆ ಸಂಬಂಧಿಸಿ ಒಟ್ಟು 11 ಸೀಲು ಮಾಡಿದ ಮಾಧರಿ ಸೀಸೆಗಳನ್ನು ಕಳುಹಿಸಿರುತ್ತೇನೆ. ನಾವು ಅಕ್ರಮ ಸೊತ್ತುಗಳನ್ನು ವಶಪಡಿಸಿಕೊಂಡು ತಯಾರಿಸಿದ ಮಹಜರು ಮನೆಯಲ್ಲಿ ಪತ್ತೆಯದ ಅಕ್ರಮ ಮದ್ಯ ಮತ್ತು ಮನೆಯಂಗಳದಲ್ಲಿ ನಿಲ್ಲಿಸಲಾಗಿದ್ದ ವಾಹನದಲ್ಲಿ ಪತ್ತೆಯಾದ ಮದ್ಯ ವಶೀಕರಣ ಬಗ್ಗೆ ಒಂದೇ ಮಹಜರು ತಯಾರಿಸಿದ್ದು ಬೇರೆ ಬೇರೆ ಮಹಜರನ್ನು ತಯಾರಿಸಿರುವುದಿಲ್ಲ. ನಾವು ಶೋಧಿಸಿದ ವಾಹನ ಸಂ: KA-19-P-510 ಸ್ಕಾರ್ಪೀಯೋ ಈ ವಾಹನಕ್ಕೆ ಸಂಬಂಧಿಸಿದ ಯಾವುದೇ ಮಾಹಿತಿಗಳು ದಾಖಲೆಗಳು ಲಭ್ಯವಿರುವುದಿಲ್ಲ. ತಕ್ಷೀರು ನಡೆದ ಸ್ಥಳದಲ್ಲಿ ಹಾಜರಿದ್ದ 6 ಆರೋಪಿಗಳನ್ನು ಮನೆಯಲ್ಲಿಯೇ ಬಂಧಿಸಿರುತ್ತೇವೆ. ಸದ್ರಿ ತಕ್ಷೀರಿಗೆ ಒಳಪಟ್ಟ ಆರೋಪಿಗಳಿಂದ ಹೇಳಿಕೆಯನ್ನು ಪಡೆದಿರುತ್ತೇನೆ. ನಾವು ತಕ್ಷೀರು ಸ್ಥಳಕ್ಕೆ ಕೊಂಚಾಡಿ ಎಂಬಲ್ಲಿಂದ ಇಬ್ಬರು ಪಂಚ ಸಾಕ್ಷಿದಾರರನ್ನು ನಮ್ಮೊಂದಿಗೆ ಕರೆದ್ಯೊದಿರುತ್ತೇವೆ. ಅವರು ಮಂಗಳೂರು ನಗರದ ಕೊಡಿಯಾಲ್ ಬೈಲ್ ಲಾಲ್‌ಭಾಗ್ ಪರಿಸರದ ವಾಸಿಗಳಾಗಿರುತ್ತಾರೆ. ಪಂಚ ಸಾಕ್ಷಿದಾರರ ಯಾವುದೇ ಹೇಳಿಕೆಯನ್ನು ಪಡೆದಿರುವುದಿಲ್ಲ. ಇತರೆ ಸಾಕ್ಷಿದಾರರ ಹೇಳಿಕೆ ಸಹ ಪಡೆದಿರುವುದಿಲ್ಲ. ನಾವು ಆ ದಿವಸ ತಕ್ಷೀರು ಸ್ಥಳಕ್ಕೆ ಹೋಗಿಲ್ಲವೆಂದರೆ ಸರಿಯಲ್ಲ, ತಕ್ಷೀರು ಸ್ಥಳಕ್ಕೆ ಹೋಗದೇ ಇರುವುದರಿಂದ ನಿಮ್ಮ ಮೇಲಾಧಿಕಾರಿಗಳು ಸ್ಥಳ ಮಹಜರಿಗೆ ಸಹಿ ಮಾಡಿರುವುದಿಲ್ಲ ಎಂದರೆ ಸರಿಯಲ್ಲ, ತಕ್ಷೀರು ಸ್ಥಳದ ಹತ್ತಿರದ ಮನೆಯವರು ಯಾರನ್ನು ಕರೆದು ಸಹಿ ಪಡೆಯಲಾಗದೇ ಇರುವುದಿರಿಂದ ನೀವು ತಕ್ಷೀರು ಸ್ಥಳಕ್ಕೆ ಹೋಗಿರುವುದಿಲ್ಲ ಎಂದರೆ ಸರಿಯಲ್ಲ. ಸ್ಥಳ ಮಹಜರನ್ನು ನಮ್ಮ ಕಛೇರಿಯಲ್ಲಿಯೇ ತಯಾರಿಸಿರುವುದು ಎನ್ನುವುದು ಸರಿಯಲ್ಲ. ವಶಪಡಿಸಿಕೊಂಡಿರುವ ತಕ್ಷೀರಿನಲ್ಲಿ ಒಳಗೊಂಡಿರುವ ವಾಹನ ಮನೆಯಂಗಳದಲ್ಲಿ ನಿಲ್ಲಿಸಲಾಗಿಲ್ಲ ಎನ್ನುವುದು ಸರಿಯಲ್ಲ. ಸದ್ರಿ ವಾಹನದಿಂದ ಯಾವುದೇ ಮದ್ಯ ದಾಸ್ತಾನು ವಶಪಡಿಸಿಕೊಂಡಿಲ್ಲವೆಂದರೆ ಸರಿಯಲ್ಲ. ನಾವು ಆರ್.ಸಿ ಮಾಲೀಕರ ವಿರೋಧಿಗಳ ಕುಮಕ್ಕಿನಿಂದ ಸದ್ರಿ ವಾಹನವನ್ನು ಈ ಪ್ರಕರಣಕ್ಕೆ ಒಳಪಡಿಸಲಾಗಿದೆ ಎನ್ನುವುದು ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರ ನೀಡಿರುತ್ತಾರೆ.

**ಪ್ರಾ.ಸ–2:**

ಶ್ರೀ ಪಿ.ರಾಜ, ಅಬಕಾರಿ ರಕ್ಷಕ, ಇಐಬಿ, ದ.ಕ ಜಿಲ್ಲೆ ಮಂಗಳೂರು ಇವರು ಕೆಮಿಕಲ್ ಕ್ಯಾರಿಯರ್ ಅಗಿದ್ದು, ದಿ:1–7–2005ರಂದು ಸಾಕ್ಷಿ ನುಡಿಯುತ್ತಾ, ಈ ಪ್ರಕರಣಕ್ಕೆ ಸಂಬಂಧಿಸಿದ ಒಟ್ಟು 11 ಮಾದರಿ ಸೀಸೆಗಳನ್ನು ಅಬಕಾರಿ ಉಪ ನಿರೀಕ್ಷಕರು, ಇಐಬಿ ದಕ ಜಿಲ್ಲೆ ಇವರು ನನಗೆ ನೀಡಿರುತ್ತಾರೆ. ಅದೇ ದಿನ ನಾನು ಮಂಗಳೂರು ರಾಸಾಯನಿಕ ತಜ್ಞರ ಕಛೇರಿಗೆ ತಲುಪಿರುತ್ತೇನೆ. ದಿ:16–7–2005ರಂದು ತಜ್ಞರು ಪರೀಕ್ಷಿಸಿದ ಮಾದರಿ ಸೀಸೆಗಳನ್ನು ಮತ್ತು ವರದಿಯನ್ನು ಪಡೆದುಕೊಂಡು ಅಬಕಾರಿ ಉಪ ನಿರೀಕ್ಷಕರಿಗೆ ತಲುಪಿಸಿ ರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಸದ್ರಿ ದಿನಾಂಕದಂದು ವಾಹನ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಯಾರೂ ಹಾಜರಾಗದೇ ಇದ್ದುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು. ನಂತರ ದಿ:22–10–2008ರಂದು ಈ ಪ್ರಕರಣದಲ್ಲಿ ಮಾದರಿ ರವಾನೆದಾರರಾದ ಪಿಡಬ್ಲ್ಯೂ–2 ಆದ ಶ್ರೀ.ಪಿ.ರಾಜ ಇವರು ದಿ:26–4–2007ರಂದು ನೀಡಿದ ಮುಖ್ಯ ಸಾಕ್ಷಿ ವಿಚಾರಣೆಗೆ ಪಾಟೀ ಸವಾಲನ್ನು ರಕ್ಷಣಾ ಪರ ವಕೀಲರು ನಡೆಸಲಾಗಿ ಸದ್ರಿ ಪಾಟೀ ಸವಾಲಿಗೆ ಸಾಕ್ಷಿದಾರರು ಉತ್ತರಿಸುತ್ತಾ– ನಾನು ದಿನನಿತ್ಯ ನಿರ್ವಹಿಸಿರುವ ಕರ್ತವ್ಯಗಳ ಬಗ್ಗೆ ಕಛೇರಿಯಲ್ಲಿ ದಾಖಲೆ ಮಾಡಲಾಗುತ್ತಿದೆ. ನಾನು ರಾಸಾಯನಿಕ ವಿಶ್ಲೇಷಕರಿಗೆ ಮಾದರಿಗಳನ್ನು ಒಪ್ಪಿಸಿ ಬಂದಿರುವ ಬಗ್ಗೆ ನನಗೆ ನಮ್ಮ ಮೇಲಾಧಿಕಾರಿಯವರಿಂದ ಯಾವುದೇ ಲಿಖಿತ ಆದೇಶ ಪಡೆದಿರುವುದಿಲ್ಲ. ನಾನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಕಛೇರಿಯಿಂದ ಮಾದರಿ ವಿಶ್ಲೇಷಣಾ ವರದಿಯನ್ನು ಪಡೆದು ತಂದಿರುತ್ತೇನೆ. ನಾನು ಸದ್ರಿ ವರದಿಯನ್ನು ರಾಸಾಯನಿಕ ವಿಶ್ಲೇಷಣೆ ಕಛೇರಿಯಿಂದ ಪಡೆದಿರುವ ಸಂದರ್ಭದಲ್ಲಿ ಅವರ ಕಛೇರಿಯ ಡಿಪ್ಯಾಚ್ ವಹಿಯಲ್ಲಿ ಸಹಿ ಮಾಡಿ ಬಂದಿರುತ್ತೇನೆ. ನಾನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಲ್ಲಿ ಮಾದರಿಗಳನ್ನು ಒಪ್ಪಿಸಿ ತದನಂತರ ವಿಶ್ಲೇಷಣಾ ವರದಿಯನ್ನು ಅವರಿಂದ ಪಡೆದು ತಂದಿರುವುದು ಈ ಪ್ರಕರಣಕ್ಕೆ ಸಂಬಂಧಿಸಿಲ್ಲ ಎಂದರೆ ಸರಿಯಲ್ಲ, ನಾನು ಸುಳ್ಳು ಸಾಕ್ಷಿ ಹೇಳಿರುತ್ತೇನೆ ಎಂದರೆ ಸರಿಯಲ್ಲ ಎಂದು ಪಾಟಿ ಸಾವಲಿಗೆ ಉತ್ತರ ನೀಡಿರುತ್ತಾರೆ.

**ಡಿಡಬ್ಲ್ಯೂ–1**

ಈ ಪ್ರಕರಣದಲ್ಲಿ ರಕ್ಷಣಾ ಸಾಕ್ಷಿದಾರರಾದ ಡಿಡಬ್ಲ್ಯೂ–1 ಆದ ಶ್ರೀ.ಎನ್.ಸಂತೋಷ ಕುಮಾರ್, ಬಿನ್:ಕುಕುಂದಪ್ಪ, 2ನೇ ಮುಖ್ಯ ಅಡ್ಡ ರಸ್ತೆ, ಚಂದ್ರಾ ಲೇಔಟ್, ಬೆಂಗಳೂರು ಇವರು ದಿ:26–4–2007ರಂದು ರಕ್ಷಣಾ ಸಾಕ್ಷಿ ನುಡಿಯುತ್ತ ತಾನು KA-19-P-510 ಸ್ಕಾರ್ಪಿಯೋ ವಾಹನ ಇದರ ಆರ್.ಸಿ ಮಾಲೀಕನಾಗಿರುತ್ತೇನೆ,ತಾನು ತನ್ನ ಸ್ವಂತ ಉಪ ಯೋಗಕ್ಕಾಗಿ ಸದ್ರಿ ವಾಹನವನ್ನು ಹೊಂದಿರುತ್ತೇನೆ. ಸದ್ರಿ ವಾಹನವನ್ನು ಖರೀದಿಸುವಾಗ ಜಿ.ಇ ಕಂಟ್ರೀವೈಡ್ ಸಂಸ್ಥೆಯಿಂದ ಸಾಲ ಪಡೆದಿರುತ್ತೇನೆ. ನಾನು ದಿ:18–6–2005ರಂದು ಸಂಜಯ್ ಕುಕ್ಯಾನ್ ಎಂಬ ನನ್ನ ಗೆಳೆಯನಿಗೆ ಅವರ ಕೋರಿಕೆ ಮೇರೆಗೆ ವಾಹನವನ್ನು ನೀಡಿರುತ್ತೇನೆ. ಸದ್ರಿ ಗೆಳೆಯ ತನ್ನ ಮನೆಯಲ್ಲಿ ಸತ್ಯ ನಾರಾಯಣ ಪೂಜಾ ಕಾರ್ಯಕ್ರಮ ನಡೆಯಲಿದ್ದು ಈ ಬಗ್ಗೆ ಒಂದು ವಾರದ ಅವಧಿಗೆ ನನ್ನ ವಾಹನವನ್ನು ಉಪಯೋಗಿಸಿರುತ್ತಾರೆ. ಸದ್ರಿ ವಾಹನವನ್ನು ಅವರ ಉಪಯೋಗಕ್ಕೆ ನೀಡಿದ ನಂತರ ದಿ:20–6–2005 ರಂದು ಸದ್ರಿ ವಾಹನವನ್ನು ಅಬಕಾರಿ ಮೊಕದ್ದಮೆಗೆ ಸಂಬಂಧಿಸಿ ಇಲಾಖಾ ವಶಕ್ಕೆ ಪಡೆಯಲಾಗಿದೆ ಎಂಬ ವಿಷಯವನ್ನು ಪಡೆದುಕೊಂಡಿರುತ್ತೇನೆ. ಸದ್ರಿ ವಿಷಯದ ಬಗ್ಗೆ ನಾನು ಸಂಜಯ ಕುಕ್ಯಾನ್ ಇವರಲ್ಲಿ ವಿಚಾರಿಸಲಾಗಿ ಸದ್ರಿ ವಾಹನವನ್ನು ದಿ:20–6–2005ರಂದು ದೇರೆಬೈಲ್‌ನಲ್ಲಿರುವ ಶಾಪ್ ಇನ್‌ಲ್ಯಾಂಡ್ ಕಾಂಪ್ಲೆಕ್ಸ್ ಇದರ ಹತ್ತಿರ ನಿಲ್ಲಿಸಿ ನನ್ನ ಮೇಲೆ ಸುಳ್ಳು ಕೇಸು ದಾಖಲಿಸಿ ವಾಹವನ್ನು ವಶಪಡಿಸಿಕೊಂಡಿದ್ದಾರೆ ಎಂದು ತಿಳಿಸಿದರು. ನಾನು ಸದ್ರಿಯವರಿಗೆ ವಾಹನವನ್ನು ಸ್ವಂತ ಉಪಯೋಗಕ್ಕೆ ಮಾತ್ರ ಉಪಯೋಗಿಸುವಂತೆ ಹಾಗೂ ಕಾನೂನು ಬಾಹಿರ ಚಟುವಟಿಕೆಗಳಿಗೆ ಉಪಯೋಗಿಸಬಾರದಾಗಿ ತಿಳಿಸಿ ವಾಹನವನ್ನು ನೀಡಿರುತ್ತೇನೆ. ಸದ್ರಿ ಪ್ರಕರಣಕ್ಕೆ ಸಂಬಂಧಿಸಿ ದಂತೆ ಜ್ಯೂಡಿಶಿಯಲ್ ನ್ಯಾಯಾಲಯದಿಂದ ಯಾವುದೇ ನೋಟಿಸು ನನಗೆ ಬಂದಿರುವುದಿಲ್ಲ. ನನ್ನ ವಾಹನವು ತಕ್ಷೀರಿಗೆ ಸಂಬಂಧಿಸಿದಂತೆ ಒಳಗೊಂಡಿರುವುದಿಲ್ಲವೆಂದು ನ್ಯಾಯಾಲಯದ ಮುಂದೆ ಹೇಳುತ್ತೇನೆ ಹಾಗೂ ನಾನು ಈ ತಕ್ಷೀರಿನಲ್ಲಿ ಪ್ರತ್ಯೇಕವಾಗಿ ಪರೋಕ್ಷವಾಗಿ ಬಾಗಿಯಾಗಿರುವುದಿಲ್ಲ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ನಾನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಶಾಮೀಲಾಗಿರುವುದಿಲ್ಲ ,ನಾನು ಯಾವುದೇ ಅಪರಾಧ ಎಸಗಿರದೇ ಇರುವುದರಿಂದ ನನ್ನ ವಾಹನವನ್ನು ನನಗೆ ಖಾಯಂ ಆಗಿ ಬಿಡುಗಡೆಗೊಳಿಸಬೇಕಾಗಿ ಪ್ರಾಧಿಕಾರದ ಮುಂದೆ ವಿನಂತಿಸುತ್ತೇನೆ.

ಸದ್ರಿ ದಿನಾಂಕದಂದು ಪಾಟೀ ಸವಾಲು ಮುಂದೂಡಲ್ಪಟ್ಟು, ನಂತರ ದಿನಾಂಕ:25–2–2009ರಂದು ರಕ್ಷಣಾ ಸಾಕ್ಷಿದಾರರನ್ನು ಸರ್ಕಾರಿ ಅಭಿಯೋಜಕರು ಪಾಟೀ ಸವಾಲು ನಡೆಸಲಾಗಿ, ಪಾಟೀ ಸವಾಲಿಗೆ ರಕ್ಷಣಾ ಸಾಕ್ಷಿದಾರರು ಉತ್ತರಿಸುತ್ತ, ಸಂಜಯ್ ಕುಕ್ಯಾನ್ ರವರು ನನಗೆ 10 ವರ್ಷಗಳಿಂದ ಪರಿಚಯವಿರುತ್ತಾರೆ, ಸಂಜಯ್ ಕುಕ್ಯಾನ್‌ರವರು ನನ್ನ ಮನೆತನದ ಸ್ನೇಹಿತರು ಮತ್ತು ಕಕ್ಷಿದಾರರಾಗಿರುತ್ತಾರೆ. ಕುಕ್ಯಾನ್‌ರವರಿಗೆ ವಾಹನವನ್ನು ಉಪಯೋಗಿಸಲು ಗುತ್ತಿಗೆ ಕೊಟ್ಟ ಬಗ್ಗೆ ನನ್ನಲ್ಲಿ ಯಾವುದೇ ದಾಖಲಾತಿ ಇಲ್ಲ, ನನ್ನ ವಾಹನವು ನನ್ನ ಖಾಸಗಿ ವಾಹನವಾಗಿರುತ್ತದೆ. ಖಾಸಗಿ ವಾಹನವನ್ನು ಬೇರೆಯವರಿಗೆ ಕೊಡಬಾರದು ಎನ್ನುವ ವಿಚಾರ ನನಗೆ ಗೊತ್ತಿರುವುದಿಲ್ಲ. ರಾಯಚೂರು ಜಿಲ್ಲೆಯಲ್ಲಿ ನನ್ನ ಮತ್ತು ಇತರೆ 5 ಜನ ಸಹೋದರರೊಂದಿಗೆ 6 ಎಕರೆ ಜಮೀನು ಹೊಂದಿದ್ದು, ಸದ್ರಿ ಜಮೀನಿನಲ್ಲಿ ಒಣ ಬೇಸಾಯ ಮಾಡಲಾಗುತ್ತಿದೆ. ನನ್ನ

ಸಹೋದರರು ಕೃಷಿ ಮಾಡಿಕೊಂಡು ರಾಯಚೂರಿನಲ್ಲಿ ಇರುತ್ತಾರೆ. ಈ ಘಟನೆ ಸಮಯದಲ್ಲಿ ನಾನು ಬೆಂಗಳೂರಿನಲ್ಲಿ ಜ್ಯೋತಿಷ್ಯ ವೃತ್ತಿ ಮಾಡುತ್ತಿದ್ದೆ. ನನ್ನ ಕೃಷಿ ಜಮೀನಿನಿಂದ ಖರ್ಚು ತೆಗೆದು ವರ್ಷಕ್ಕೆ 35,000/– ಆದಾಯ ಇರುತ್ತದೆ. ನನಗೆ ಜ್ಯೋತಿಷ್ಯದಿಂದ ತಿಂಗಳಿಗೆ 10,000 ದಿಂದ 15,000 ಆದಾಯ ಇರುತ್ತದೆ. ಬೆಂಗಳೂರಿನಲ್ಲಿ ನಾನು ನನ್ನ ಹೆಂಡತಿ ಮತ್ತು 2 ಮಕ್ಕಳೊಂದಿಗೆ ವಾಸ ಮಾಡುತ್ತೇನೆ. ನನ್ನ ಮಗ ಪಿಯುಸಿ ಹಾಗೂ ಮಗಳು 8ನೇ ಕ್ಲಾಸು ಓದುತ್ತಿದ್ದಾಳೆ. ನಾನು ಬೆಂಗಳೂರಿನಲ್ಲಿ ಬಾಡಿಗೆ ಮನೆಯಲ್ಲಿ ವಾಸದಲ್ಲಿರುತ್ತೇನೆ ತಿಂಗಳಿಗೆ 4 ಸಾವಿರ ರೂ ಬಾಡಿಗೆ ಕೊಡುತ್ತೇನೆ. ನನ್ನ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ವರ್ಷಕ್ಕೆ ಅಂದಾಜು 22 ಸಾವಿರದಿಂದ 25 ಸಾವಿರ ರೂಗಳು ಖರ್ಚಾಗುತ್ತದೆ. ನಾನು ಸ್ಕಾರ್ಪೀಯೋ ವಾಹವನ್ನು ಸಾಲ ಮಾಡಿ ಪಡೆದಿರುತ್ತೇನೆ. ಸದ್ರಿ ವಾಹನದ ಬೆಲೆ ಸುಮಾರು 7 ಲಕ್ಷವಾಗಿದ್ದು,ನಾನು 6 ಲಕ್ಷ ರೂ ಸಾಲ ಪಡೆದಿರುತ್ತೇನೆ. ಪ್ರತಿ ತಿಂಗಳಿಗೆ ಸಾಲ ಬಡ್ಡಿ ಸೇರಿ 10 ಸಾವಿರ ರೂ.ಅಂತೆ 5 ವರ್ಷ ಕಟ್ಟ ಬೇಕಾಗಿರುತ್ತದೆ. ನಾವು ಸಹೋದರರು ಪ್ರತಿ ವರ್ಷ ಕೃಷಿ ಆದಾಯವನ್ನು ಒಬ್ಬರೇ ಪಡೆದು ಕೊಳ್ಳುತ್ತಿದ್ದು ವರ್ಷಕ್ಕೊಮ್ಮೆ ಬದಲಾವಣೆಯಾಗುತ್ತದೆ. ನನಗೆ ಸ್ಕಾರ್ಪಿಯೋ ವಾಹನವನ್ನು ಇಟ್ಟು ಕೊಳ್ಳುವಷ್ಟು ಅರ್ಧಿಕ ಪರಿಸ್ಥಿತಿ ಇದೆ ಎಂದರೆ ಸರಿಯಲ್ಲ, ನನ್ನ ಜ್ಯೋತಿಷಿ ವೃತ್ತಿಯಿಂದ ಬರುವ ಆದಾಯದಿಂದ ನನ್ನ ಸಂಸಾರ ನಿರ್ವಹಣೆ ಮಾಡಲು ಸಾಧ್ಯವಾಗುತ್ತಿರಲಿಲ್ಲ ಎಂದರೆ ಸರಿಯಲ್ಲ, ಅದಕ್ಕೋಸ್ಕರ ನಾನು ಸಂಜಯ್ ಕುಕ್ಯಾನ್ ನೊಟ್ಟಿಗೆ ಸೇರಿ ಅಕ್ರಮ ಮದ್ಯ ಸಾಗಾಟ ಮತ್ತು ಮಾರಾಟಕ್ಕಾಗಿ ವಾಹನವನ್ನು ಉಪಯೋಗಿಸುತ್ತಿದ್ದೆ ಎಂದರೆ ಸರಿಯಲ್ಲ. ಸಂಜಯ್ ಕುಕ್ಯಾನ್‌ರವರು ನನ್ನ ಅನುಮತಿಯ ಮೇರೆಗೆ ಮದ್ಯವನ್ನು ಸಾಗಾಟ ಮಾಡುತ್ತಿದ್ದಾಗ ಅಬಕಾರಿ ಅಧಿಕಾರಿಗಳಿಗೆ ಸಿಕ್ಕಿ ಬಿದ್ದಿದ್ದಾರೆ ಎಂದರೆ ಸರಿಯಲ್ಲ, ವಾಹನವನ್ನು ಮುಟ್ಟುಗೋಲು ಕ್ರಮದಿಂದ ಪಾರು ಮಾಡಲು ಸುಳ್ಳು ಸಾಕ್ಷಿ ಹೇಳುತ್ತಿದ್ದಾರೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಮರು ವಿಚಾರಣೆ: ರಕ್ಷಣಾ ಪರ ವಕೀಲರು ಶ್ರೀ.ಕೆ.ಎಸ್.ಆಳ್ವ ಇವರಿಂದ:**

ಸಾಕ್ಷಿದಾರರಿಗೆ ಸರಾಸರಿ ರೂ.15 ಸಾವಿರದಿಂದ 25 ಸಾವಿರ ಆದಾಯ ಗಳಿಕೆ ಇರುತ್ತದೆ.

**ಪಾಟೀ ಸವಾಲು ಎ.ಡಿ.ಪಿ ರವರಿಂದ:**

ನಾನು ಕಳೆದ 22 ವರ್ಷಗಳಿಂದ ಜ್ಯೋತಿಷಿ ವೃತ್ತಿ ಮಾಡುತ್ತಿದ್ದೇನೆ. ಈಗ ನನಗೆ 44 ವರ್ಷ ವಯಸ್ಸು, 2007–08ನೇ ಸಾಲಿಗೆ ಸಂಬಂಧಿಸಿದಂತೆ ನನಗೆ 2.50 ಲಕ್ಷ ಆದಾಯವಿದ್ದು ಅದರ ಮೇಲೆ ರೂ.16,000 ಆದಾಯ ತೆರಿಗೆ ಕಟ್ಟಿರುತ್ತೇನೆ. ನನ್ನ ಹತ್ತಿರ, ಆ ಬಗ್ಗೆ ದಾಖಲೆ ಇದ್ದು ಅದನ್ನು ಮುಂದಿನ ವಾಯಿದೆಗೆ ಹಾಜರುಪಡಿಸುತ್ತೇನೆ ಎಂದು ಪಾಟೀ ಸವಾಲಿಗೆ ಉತ್ತರ ನೀಡಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಮತ್ತು ಪ್ರಾ.ಸ–1 ,ಪ್ರಾ.ಸ–2 ಮತ್ತು ಡಿಡಬ್ಲ್ಯೂ–1 ರ ಸಾಕ್ಷಿ ವಿಚಾರಣೆಯನ್ನು ಹಾಗೂ ಅವರ ಪರ ವಕೀಲರ ವಾದವನ್ನು ಮತ್ತು ತನಿಖಾಧಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ದಿ:20–6–2005 ದಂದು ಜಪ್ತು ಪಡಿಸಿರುವ ಮಹೀಂದ್ರ ಸ್ಕಾರ್ಪಿಯೋ ಸಂ: KA-19-P-510ನ್ನು ಅಕ್ರಮ ಮದ್ಯ ತಯಾರಿಕಾ ಘಟಕದಿಂದ 657.000 ಲೀ. ನಕಲಿ ಮದ್ಯವನ್ನು ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಸಾಗಾಟಮಾಡಲು ಬಳಸಿಕೊಳ್ಳಲಾಗಿದ್ದು,ಪ್ರಕರಣದಲ್ಲಿ ಪತ್ತೆಹಚ್ಚಿದ ಒಟ್ಟು 1063.320 ಲೀಟರು ಮದ್ಯದ ಪೈಕಿ 657.000 ಲೀ ನಕಲಿ ಮದ್ಯವನ್ನು ಸದ್ರಿ ವಾಹನದಿಂದಲೇ ಸ್ಥಳ ಮಹಜರು ಜರುಗಿಸಿ ಜಪ್ತುಪಡಿಸಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆ ಯಾಗಿರುತ್ತದೆ. ವಾಹನ ಮಾಲೀಕರು ಪ್ರಾದಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತ ತಾನು ಸದ್ರಿ ವಾಹನವನ್ನು ಒಂದು ವಾರದ ಮಟ್ಟಿಗೆ ತನ್ನ ಗೆಳೆಯನಿಗೆ ಉಪಯೋಗಿಸಿಕೊಳ್ಳಲು ನೀಡಿರುತ್ತೇನೆ ಎಂದು ಸಮಂಜಾಯಿಷಿ ನೀಡಿದ್ದರೂ, ಸದ್ರಿ ವಾಹನವನ್ನು ಮಿತ್ರನಿಗೆ ನೀಡುವ ಸಂದರ್ಭದಲ್ಲಿ ವಾಹನವನ್ನು ಯಾವುದೇ ಅಕ್ರಮ ಚಟುವಟಿಕೆಗಳಿಗೆ ಬಳಸಬಾರದು ಎಂದು ತಾಕೀತು ಮಾಡಿದ ಬಗ್ಗೆ ಲಿಖಿತ ದಾಖಲೆಗಳನ್ನು ಒದಗಿಸಿರುವುದಿಲ್ಲ ಹಾಗೂ ತನ್ನ ಮಿತ್ರನ ಚಾರಿತ್ರ್ಯದ ಬಗ್ಗೆ ಯಾವುದೇ ವಿವರಣೆಗಳನ್ನು ನೀಡಿರುವುದಿಲ್ಲ.ಹಾಗೂ ಸದ್ರಿ ವಾಹನವನ್ನು ಅವರ ಮಿತ್ರನಿಗೆ ನೀಡಿರುವ ಪೂರ್ವದಲ್ಲಿ ಸದ್ರಿ ವಾಹನ ತನ್ನ ಸ್ವಂತ ಉಪಯೋಗದಲ್ಲಿ ಇತ್ತು ಎಂಬುದರ ಬಗ್ಗೆ ಯಾವುದೇ ಪುರಾವೆ ಹಾಗೂ ಸಾಕ್ಷ್ಯಾಧಾರಗಳನ್ನು ಒದಗಿಸಲು ವಿಫಲರಾಗಿರುತ್ತಾರೆ.

ವಾಹನದ ಮಾಲೀಕರು ತನ್ನ ಆಸ್ತಿ ಮತ್ತು ವರಮಾನದ ಬಗ್ಗೆ ವಿವರಣೆಗಳನ್ನು ನೀಡಿ ಆದಾಯ ತೆರಿಗೆ ಪಾವತಿಸಿರುವ ಬಗ್ಗೆ ದಾಖಲೆಗಳನ್ನು ಸಲ್ಲಿಸಿರುವರಾದರೂ, ತನ್ನ ಒಡೆತನದಲ್ಲಿ ಸ್ಕಾರ್ಪಿಯೋ ವಾಹನದಂತಹ ಐಷಾರಾಮಿ ವಾಹನವನ್ನು ಇಟ್ಟುಕೊಳ್ಳುವಂತಹ ವರಮಾನವನ್ನು ಪಡೆಯುತ್ತಿರುವುದರ ಬಗ್ಗೆ ಪ್ರಾದಿಕಾರಕ್ಕೆ ಒಪ್ಪಿಸಿರುವ ದಾಖಲೆಗಳನ್ನು ಪರಿಪೂರ್ಣವೆಂದು ಪರಿಗಣಿಸಲು ಸಾಧ್ಯವಾಗಿರುವುದಿಲ್ಲ. ಕಾರಣ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಾಹನದ ಮಾಲೀಕರು ವಿಫಲರಾಗಿರುವುದರಿಂದ ಸದ್ರಿ ವಾಹನವನ್ನು ಅಕ್ರಮ ಮದ್ಯ ತಯಾರಿಕೆಗೆ ಹಾಗೂ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಸ್ಕಾರ್ಪಿಯೋ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮಹೀಂದ್ರ ಸ್ಕಾರ್ಪಿಯೋ ಸಂ:KA-19-P-510ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಇಐಬಿ, ದ.ಕ ಮತ್ತು ಉಡುಪಿ ಜಿಲ್ಲೆ ಮಂಗಳೂರು ಇವರ ತಕ್ಷೀರು ಸಂ:1/2004–05 ದಿ:20–6–2005ರಲ್ಲಿ ಜಪ್ತು ಪಡಿಸಿರುವ ಮಹೀಂದ್ರ ಸ್ಕಾರ್ಪಿಯೋ ಸಂ: KA-19-P-510 ನ್ನು ನಿಯಮ 43ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:28–9–2005ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಅದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ ಮಾಲೀಕರು ಸದ್ರಿ ಮಧ್ಯಂತರ ಬಿಡುಗಡೆ ಹೊಂದಿರುವ ಮಹೀಂದ್ರ ಸ್ಕಾರ್ಪಿಯೋ ಸಂ: KA-19-P-510 ನ್ನು ಈ ಆದೇಶದ 30 ದಿನಗಳೊಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ಉಪ ನಿರೀಕ್ಷಕರು(2) ಮಂಗಳೂರು ಉತ್ತರ ವಲಯ–1 ಇವರ ಮೂಲಕ ಇಲಾಖೆಗೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಭದ್ರತೆಯಾಗಿ ಈ ಪ್ರಾಧಿಕಾರಕ್ಕೆ ನೀಡಿರುವ ಬ್ಯಾಂಕ್ ಗ್ಯಾರೆಂಟಿ ಸಂ:7/2005 ದಿ:3–10–2005ರಂತೆ ಮೊತ್ತ ರೂ.4,85,000/– ನ್ನು ಇನ್‌ವೋಕ್ ಮಾಡಿ ಸರ್ಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿ ಕೊಳ್ಳಲು ಆದೇಶಿಸಿದೆ. ಅಬಕಾರಿ ಉಪ ನಿರೀಕ್ಷಕರು(2) ಮಂಗಳೂರು ಉತ್ತರ ವಲಯ–I ಇವರು ಸದ್ರಿ ವಾಹನವನ್ನು ಅವರ ವಶಕ್ಕೆ ಪಡೆದು ಆದೇಶದ ಅವಧಿಯ ಮಿತಿ ಪೂರ್ಣಗೊಂಡ ಒಂದು ವಾರದೊಳಗೆ ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:10–9–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ಎನ್.ಶಿವರಾಮ ಶೆಟ್ಟಿ, ಅಬಕಾರಿ ಉಪ ನಿರೀಕ್ಷಕರು, ಇಐಬಿ, ಉಡುಪಿ ಮತ್ತು ದ.ಕ ಜಿಲ್ಲೆ ಮಂಗಳೂರು
ಪ್ರಾ.ಸಾ–2 : ಶ್ರೀ ಪಿ.ರಾಜ, ಅಬಕಾರಿ ರಕ್ಷಕ, ಇಐಬಿ, ಉಡುಪಿ ಮತ್ತು ದ.ಕ ಜಿಲ್ಲೆ, ಮಂಗಳೂರು.

**ಅನುಬಂಧ–II**

**ಪಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ–I | : ಶೋಧನಾ ಸಮುಚಿತ ವಾರೆಂಟ್ |
| ನಿಶಾನೆ ಪಿ–2 | : ಮಹಜರು ಪ್ರತಿ |
| ನಿಶಾನೆ ಪಿ–3 | : ಪಥಮ ಮಾಹಿತಿ ವರದಿ ಪ್ರತಿ |
| ನಿಶಾನೆ ಪಿ –4 | : ರಾಸಾಯನಿಕ ವಿಶ್ಲೇಷಣಾ ವರದಿ ಪ್ರತಿ |
| ನಿಶಾನೆ ಪಿ–5 | : ಬಿಎಕ್ಸ್ ಟಾಕ್ಸ್ ವರದಿ ಪ್ರತಿ |
| ನಿಶಾನೆ ಪಿ–6 | : ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರೀತ್ಯಾ ವರದಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

ಡಿಡಬ್ಲ್ಯೂ–1: ಶ್ರೀ ಎನ್. ಸಂತೋಷ ಕುಮಾರ್, ಬಿನ್ ಕುಕುಂದಪ್ಪ, 2ನೇ ಮುಖ್ಯ ಅಡ್ಡರಸ್ತೆ, ಚಂದ್ರಾ ಲೇಔಟ್, ಬೆಂಗಳೂರು.

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1029

**KARNATAKA ADMINISTRATIVE TRIBUNAL, B.D.A. COMPLEX, INDIRANAGAR, BANGALORE-38**

**NOTIFICATION**

**No.SLR(KAT)/PPP/16/2009-10, Bangalore, Dated:7th November, 2009**

Sealed quotations are hereby invited from the Private Off-Set Printers to express willingness for printing the Karnataka Services Law Journal of the specification given below, published by the Services Law Report (KAT) Council, Bangalore, by making use of ready to print material in soft copy, subject to the following terms and conditions.

**A. SPECIFICATION OF THE JOURNAL.**

| | | |
|---|---|---|
| 1) | Periodicity (Published on third week of every month) | Monthly |
| 2) | Number of copies to be printed | 1,000 |
| 3) | Size | Super Royal size (6.5" by 9.5") |
| 4) | Printing Process | Off-Set Printing |
| 5) | Quality of paper to be used | 70 GSM maplitho Natural Shade. |
| 6) | Quality of cover | 120 GSM art paper in bi-colour |

**B. TERMS AND CONDITIONS.**

1) Cover page charges shall be separately shown.

2) The cost of printing shall include cost of paper charges.

3) The rate shall be quoted per page.

4) Printing work shall be done through off-set printing machine.

5) The successful quotationer shall be prepared to file a declaration before the District Magistrate, Bangalore Urban District, in accordance with the provisions of the press and Registration of Books Act, 1867.

6) The duration of Agreement is for a period one year from the date of entering into the Agreement.

7) No escalation/ revision in the rates will be allowed during the subsistence of the agreement.

8) The undersigned reserves the liberty to discontinue the printing work entrusted, if the printing work is not up to the mark and the copies of Journal are not printed and supplied within 10 days from the date of handing over of material for printing the journal, without assigning any reason, at any time.

9) If the journal is not printed and supplied within 10 days from the date of handing over of material 10% of the cost of the printing of the particular issue of the journal will be deducted at the time of passing the bill for payment.

10) No extra charges or extra cost will be paid under any circumstances.

11) The Agreement shall be executed on a Rs.20/- Non-Judicial Stamp Paper.

12) Any conditions that are not included or specifically stipulated here are negotiable.

13) The undersigned reserves the right to accept or reject the quotations without assigning any reasons.

14) The printing work of the journal may be entrusted to more than one printers simultaneously.

15) Model copy of the journal to be printed shall be submitted along with the quotation.

**C. INFORMATION/ DOCUMENTS TO BE FURNISHED.**

1) Printing capacity of the press.

2) Numbers of Printing Machine/ Binding Machine and type of machine (details of the capacity of each machine to be given separately).

3) Experience in printing the Journal/ Periodicals.

The quotations, along with the required additional information, should reach the undersigned on or before 27.11.2009 by 4-30 P.M.

The undersigned may be contacted during the office hours for any additional information, if neccessary.

The quotations should be sent in a sealed cover address to the Member-Secretary, SLR (KAT) Council, B.D.A. Complex, Indiranagar, Bangalore-560038, superscribing "QUOTATIONS FOR PRINTING OF K.S.L.J & NOT TO BE OPENED BEFORE 27.11.2009.

Last date for receipt of Expression of willingness is 27.11.2009 at 4.30 pm.

BY ORDER OF THE HON'BLE CHAIRMAN,

Registrar,

Karnataka Administrative Tribunal, Bangalore-38.

PR-1133

**URBAN DEVELOPMENT DEPARTMENT**

**NOTIFICATION**

**No.UDD/1129/MNX/2003, Bangalore, Dated:7th November, 2009**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette Dated:15.12.1988, pages 362 to 378 and Dated:29.12.1988 pages 399 to 414 vide Notification No.BDA/ALAO/A1/PR/117, Dated:15.12.1988 and Final Notification No.HUD 334 MNX 1990 dated:03-11-1990 was published in the Karnataka Gazette Dated:20.11.1990 under sub-section(1) of Section-19 of BDA Act 1976 (Karnataka Act-12 of 1976) for formation of layout Called "BYRASANDRA TAVAREKERE MADIVALA IVTH STAGE LAYOUT''.

**SCHEDULE**

**DISTRICT:BANGALORE TALUK: BANGALORE SOUTH HOBLI:BEGUR VILLAGE:BELAKANAHALLI**

| Sl. No. | Name of the Khatedar/Anubhavadar Sri/Smt. | Sy.No. | Dry/ Wet/ Garden | Total Extent | Kharab | Remaining Extent | Assesment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | Doddeera. Munivenkatappa S/o Chikkannaiyappa, Nagaraj, Munivenkatappa S/o Late Earappa | Dry | 7/8 | 0-13 | | 0-13 | 0-51 | 0-13 | **11875.75 Sq.ft** | 7/1 | 7/6 | 7/9 | 8 |

**TOTAL EXTENT WITH DRAWN 11875.75 Sq.ft. (Eleven Thousand eight hundred seventy five point seven five Square fit Only)**

**Bangalore Development Authority shall fix the boundary for the 11875.75 Sq.ft of land withdrawn from acquisition.**

By Order and in the name of the Governer of Karnataka,

**M.S. PREMACHANDRA**

Under Secretary to Government,

Urban Development Department.

PR-1151